# ನೀತಿಸಾರ.

## ಮೂರನೆಯ ಭಾಗ.

---

## ಸರ್ವಜ್ಞಪದಗಳು.

ಧಾರವಾಡಜಿಲ್ಲೆಯ ಮಾಸೂರಿನಲ್ಲಿ ಬಸವರಸನೆಂಬ ಆರಾಧ್ಯ ಬ್ರಾಹ್ಮಣನಿದ್ದನು. ಅವನಹೆಂಡತಿ ಮಲ್ಲಮ್ಮ. ಬಸವರಸನು ಕಾಶಿಗೆ ಹೋಗಿ, ಪುತ್ರನ ವರವನ್ನು ಪಡೆದುಬರುವಾಗ ದಾರಿಯಲ್ಲಿ ಅಂಬಲೂರಿನಲ್ಲಿದ್ದ ಕುಂಬಾರ ಮಾಳಿಯೆಂಬವಳನ್ನು ಮೋಹಿಸಿ, ಅಲ್ಲಿ ನಿಂತನು. ಆಕೆಯ ಗರ್ಭವಲ್ಲಿ ಸರ್ವಜ್ಞನು ಹುಟ್ಟಿದನು. ಇವನು ವೀರಶೈವಕವಿ. ಸುಮಾರು ಕ್ರಿ. ಶ. ೧೭೦೦ (ಕವಿಚರಿತ್ರೆ R. N.)

---



# ವಿಷಯಸೂಚಿಕೆ.

# ಸರ್ವಜ್ಞ ಪದಗಳು.

## ೧. ಪೀಠಿಕಾ ಪ್ರಕರಣ.

ನಂದಿಯನೇರಿದವನ । ಚಂದ್ರನಸೂಡಿದವನ
ಕಂದನಬೇಡಿನಲಿದವನ । ನೆನೆವುತ್ತ
ಮುಂದೆಹೇಳಿದನು ಸರ್ವಜ್ಞ ॥ ೧ ॥
ಮುನ್ನನಾಪೂರ್ವದಲಿ । ಪನ್ನಗಧರನಾಳು ।
ಎನ್ನಯಪೇರುಪುಷ್ಪ । ದತ್ತನೆಂದು
ಮನ್ನಿಪುದುದಯದಿ ಸರ್ವಜ್ಞ ॥ ೨ ॥
ಅಂದಿನಪುಷ್ಪದತ್ತ । ಮುಂದೇವರುಷಿಯಾಗಿ
ಸಂದೇಹಮುಳಿದುಸರ್ವಜ್ಞ । ನೆಂದೆನಿಸಿ
ನಿಂದವನುನಾನೆ ಸರ್ವಜ್ಞ ॥ ೩ ॥
ಮಕ್ಕಳಿಲ್ಲವೆಂದು । ಅಕ್ಕಮಲ್ಲಮ್ಮನು
ದುಕ್ಕವ ಬಸವರಸಗರುಹೆ । ಕಾಶಿಯ
ಮುಕ್ಕಣ್ಣನೊಲಿದ ಸರ್ವಜ್ಞ ॥ ೪ ॥
ಮಾಸೂರುಬಸವರಸ । ಕೂಸನೀಶನಕೇಳೆ
ಕಾಶಿಯಅಭವನೊಳ್ಜನಿಸಿ । ವರವನು
ಸೂಸಿದನಂದು ಸರ್ವಜ್ಞ ॥ ೫ ॥
ಗಂಡಾಗಬೇಕೆಂದು । ಪಿಂಡವನುಂಗಲದು
ಲೆಂಡಮಲ್ಲವ್ವೆಯೊಳ್ಜನಿಸಿ । ನಾನಿದ
ಕಂಡದ್ದುಪೇಳ್ದೆ ಸರ್ವಜ್ಞ ॥ ೬ ॥
ಗಡಿಗೆಮುಡಿಕೆಯಕೊಂಡು । ಅಡುತಿಹವೇಳೆಗೆ
ಹಿಡಿಯೆಮುಳಿವೋಡವಾಗ । ಅವರಿಬ್ಬರ್ಗೆ
ತಡೆಬಿಡಲಾಯ್ತು ಸರ್ವಜ್ಞ ॥ ೭ ॥

ಅಂಬಲೂರೊಳಗಿರ್ಪ । ಕುಂಬಾರಮನೆಯೊಳಗೆ
ಶಂಭುವುಕೊಟ್ಟ ಶಿಶುನಾನು । ಬಸವರಸ
ನಿಂಬಿಟ್ಟನೆನ್ನ ಸರ್ವಜ್ಞ ॥ ೮ ॥
ಬಿಂದಿಟ್ಟುಹೋದಲ್ಲಿ । ಅಂದುಬಸುರಾದವ
ಳೊಂದಾಗಿ ಹೊತ್ತುದಶಮಾಸ । ಉದರದಲಿ
ನಿಂದುಬೆಳೆದೆನು ಸರ್ವಜ್ಞ ॥ ೯ ॥
ಹೆತ್ತವಳುಮಾಳಿಯೆ । ನ್ನೊತ್ತಿತೆಗೆದವಳು ಬೆಂ
ನೆತ್ತಿಹಿಡಿದವಳುಕಾಳಿ । ಮೊರದಲಿನನ್ನ
ನೊತ್ತಲಿರಿಸಿದಳು ಸರ್ವಜ್ಞ ॥ ೧೦ ॥
ಬೆಳೆದೆನ್ನವರುನನ್ನ । ಕಳೆಯಕಂಡವರೆಂದ
ರಿಳೆಯೊಳುಮೊಳಕೆಯತೆರದಿ । ತಿಳಿವಂತೆ
ತಿಳಿದುದನರುಹು ಸರ್ವಜ್ಞ ॥ ೧೧ ॥
ಗಂಡುತನ್ನದುಯೆಂಬ । ಲೆಂಡತನ್ನದುಯೆಂಬ
ಖಂಡಪರಶುವಿನವರಪುತ್ರ । ನಾಂನೆರೆ
ಕಂಡದ್ದುಪೇಳ್ವೆ ಸರ್ವಜ್ಞ ॥ ೧೨ ॥
ಮಾಳನುಮಾಳಿಯು । ಕೂಳಿನಹೆಮ್ಮೆಯಲಿ
ಕೇಳರಿನ್ನಾರಮಗನೆಂದು । ನಾಶಿವನ
ಮೇಳದಮಗನು ಸರ್ವಜ್ಞ ॥ ೧೩ ॥
ತಂದೆಹಾರುವನಲ್ಲ । ತಾಯಿಕುಂಬರಮಾಳಿ
ಚಂದ್ರಶೇಖರನವರದಿಂದ । ಪುಟ್ಟಿದ
ಕಂದನಾನೆಂದ ಸರ್ವಜ್ಞ ॥ ೧೪ ॥
॥ ೧೫–೧೬ ॥

* * * * *

ತಾಯೆಂದೆನಲ್ಲದೆ । ತಾಯಿನಾನೆಂದೆನೇ
ತಾಯೇನಾನೆಂದುನುಡಿದೆನು । ಪರಸ್ತ್ರೀಯರ
ತಾಯಿಯೆಂದೆಂಬೆ ಸರ್ವಜ್ಞ ॥ ೧೭ ॥
ನೂಕಿಬಿಟ್ಟರುಆಗ । ಕಾಕುತನದೊಳುಬೇಗ
ಲೋಕದೊಳಗೆಲ್ಲಕಂಡದ್ದು । ನುಡಿದುತಾ
ನೇಕವಾಗಿಹನು ಸರ್ವಜ್ಞ ॥ ೧೮ ॥

ಮೀರಿಬೆಳೆಯಲುತನುವು । ಆರುಬಣ್ಣವನುಡಿಸಿ
ಮೂರು ರುಚಿದೋರಿಮೆರೆಸಿದ । ತನ್ನ ತಾ
ತೋರದೆಹೋದ ಸರ್ವಜ್ಞ ॥ ೧೯ ॥
ಆರುಹುಕೂಡಿತುಪ್ರಾಣ । ಕುರುಹುಬೆರೆಯಿತುಜಾಣ
ಹರುವಾಗಿಹೋಯ್ತುಭವಮಾಲೆ । ಮುಕ್ತಿಯು
ಹರನಂದವಾಯ್ತು ಸರ್ವಜ್ಞ ॥ ೨೦ ॥
ಕಣ್ಣುನಾಲಿಗೆಮನವು । ಪನ್ನಗಧರಕೊಟ್ಟ
ಚೆನ್ನಾಗಿಮನವತೆರೆವುತ್ತಾ । ಬಿಡದೆಶ್ರೀ
ಚೆನ್ನನನೆನಹು ಸರ್ವಜ್ಞ ॥ ೨೧ ॥
ಸಣ್ಣನೆಮನೆಯೊಳಗೆ । ನುಣ್ಣನೆಯಶಿಲೆಯೊಳಗೆ
ಬಣ್ಣಿಸಿಬರೆದಪಠದೊಳಗೆ । ಇರುವಾತ
ತನ್ನೊಳಗಿರನೆ ಸರ್ವಜ್ಞ ॥ ೨೨ ॥
ಕ್ಷೀರದೊಳಿಹ ಘೃತ । ನೀರಿನಕಲ್ಮಷವು
ಆರಿಗೂತೋರದದರಂತೆ । ಯೆನ್ನೊಳಗೆ
ಸಾರಿಹನುಶಿವನು ಸರ್ವಜ್ಞ ॥ ೨೩ ॥
ಪರಮಾತ್ಮಗೆಣೆಯಿಲ್ಲಂ । ಬರಕೆನಿಚ್ಚಣಿಯಿಲ್ಲ
ಹೊರಗಾದಮೇಲೆ ಭಯವಿಲ್ಲ । ಮರ್ತ್ಯದೊಳು
ಇರದವರಿಲ್ಲ ಸರ್ವಜ್ಞ ॥ ೨೪ ॥
ಸರ್ವಜ್ಞನೆಂಬಾತ । ಗರ್ವದಿಂದೈದಾನೆ
ಸರ್ವರೊಳೊಂದೊಂದುನುಡಿಕಲ್ತು । ವಿದ್ಯೆಯ
ಪರ್ವತವೆಆದ ಸರ್ವಜ್ಞ ॥ ೨೫ ॥
ಹೊಲಸುಮಾಂಸದಹುತ್ತ । ಯೆಲುವಿನಪಂಜರ
ಹೊಲೆಬಲಿದತನುವಿನೊಳಗಿರ್ದ । ಮತ್ತಾತ
ಕುಲವಬಯಸುವನೆ? ಸರ್ವಜ್ಞ ॥ ೨೬ ॥
ಎಲುವಿನಕಾಯಕ್ಕೆ । ಸಲೆಚರ್ಮದ ಹೊದಿಕೆ ।
ಮಲಮೂತ್ರಕ್ರಿಮಿಗಳೊಳಗಿರ್ದ । ದೇಹಕ್ಕೆ
ಕುಲವಾವುದೈಯ? ಸರ್ವಜ್ಞ ॥ ೨೭ ॥

ಪಂಚಪಾಶದತತ್ವ । ಚಂಚಲದೇಹವನು
ಮಿಂಚೆಂದುಕಾಣಲರಿಯರು । ಭವಮುಂದೆ
ಗೊಂಚಲಾಗಿಹುದು ಸರ್ವಜ್ಞ ॥ ೨೮ ॥
ಆಡಿಂಗೆಆರ್ಕೋಟಿ । ಕೋಡಗಕ್ಕೊಂದುದಿನ
ಕೋಡಗನೂರುಮಡಿದರೇ । ನರಿಹುಬ್ಬ
ನಾಡಿಸುತ್ತಿಹುದು ಸರ್ವಜ್ಞ ॥ ೨೯ ॥
ಆಡಾದನಜನುತಾ । ಕೋಡಗಾದನು ವಿಷ್ಣು
ನೋಡುವಶಿವನು ನರಿಯಾದ । ಈ ಬೆಡಗು
ರೂಢಿಯೊಳುಬಲ್ಲೆ ಸರ್ವಜ್ಞ ॥ ೩೦ ॥
ಹೇಳಲರಿಯೆನುನಾನು । ಹೇಳೆನಲುಹೇಳಿದೆನು
ಭಾಳಲೋಚನನಶರಣರಾ । ಆಳಾಗಿ
ಹೇಳಿದೆನುಕಾಣೊ! ಸರ್ವಜ್ಞ ॥ ೩೧ ॥
ಕೋಳಿಕೂಗದಮುನ್ನ । ಆರುಮೇಳದಮುನ್ನ
ಭಾಳಲೋಚನನನೆನೆವವರ । ಮನೆಗೆ ತಾ
ನಾಳಾಗಿಯಿಹೆನು ಸರ್ವಜ್ಞ ॥ ೩೨ ॥
ತನ್ನಮನಸಿಗೆನೆನಹು । ಪನ್ನಗಧರಕೊಟ್ಟ
ಬಿನ್ನಾಣದಿಂದಸ್ತುತಿಗೆಯ್ವು । ಪೊಗಳ್ವೆನಾ
ಚೆನ್ನಮೂರುತಿಯ ಸರ್ವಜ್ಞ ॥ ೩೩ ॥

## ೨. ಗುರುಪದ್ಧತಿ.

ಗುರುಪಾದಕೆರಗಿದರೆ । ಶಿರಸುತಾಮಣಿಯಕ್ಕು
ಪರಿಣಾಮವಕ್ಕುಪದವಕ್ಕು । ಕೈಲಾಸ
ನೆರೆಮನೆಯೆಅಕ್ಕು ಸರ್ವಜ್ಞ ॥ ೧ ॥
ಗುರುವೆನಿಮ್ಮನುನೆನೆದು । ಉರಿವಕಿಚ್ಚನುಹೊಗಲು
ಉರಿತಗ್ಗಿ ಉದಕಕೊಂಡಂತೆ । ಗುರುವಿನ
ಕರುಣವುಳ್ಳರ್ಗೆ ಸರ್ವಜ್ಞ ॥ ೨ ॥

ಬೆಟ್ಟಕರ್ಪುರಬೆಂದು । ಬೊಟ್ಟಿಡಲುಬೂದಿಲ್ಲ
ನೆಟ್ಟನೆಗುರುವಿಗೆರಗಿದರೆ । ಪಾತಕವು
ಸುಟ್ಟುಹೋಗುವುದು ಸರ್ವಜ್ಞ ॥ ೩ ॥
ಸುರತರುವು ಮರನಲ್ಲ । ಸುರಭಿಯೊಂದಾವಲ್ಲ
ಪರುಸಪಾಷಾಣದೊಳಗಲ್ಲ । ಗುರುರಾಯ
ನರರೊಳಗಲ್ಲ ಸರ್ವಜ್ಞ ॥ ೪ ॥
ತಂದೆಗೂ ಗುರುವಿಗೂ । ಒಂದೆ ಅಂತರವುಂಟು
ತಂದೆಹೇಳುವನು ಬಲುಬುದ್ಧಿ । ಗುರುವಿಂದ
ಬಂಧನವುಬಯುಲು ಸರ್ವಜ್ಞ ॥ ೫ ॥
ಗುಡಿಯುಬೋದಿಗೆಕಲ್ಲು । ನಡುವೆರಂಗದಕಲ್ಲು
ಪೊಡಮಡಿಸಿಕೊಂಬುದದುಕಲ್ಲು । ವರಗಳನು
ಕೊಡುವುದೂಕಲ್ಲು ಸರ್ವಜ್ಞ ॥ ೬ ॥
ಕಲ್ಲುಕಲ್ಲೆಂಬುವಿರಿ । ಕಲ್ಲೊಳಿರ್ಪುದೆದೈವ?
ಕಲ್ಲಿಗೆಪ್ರಾಣವಿತ್ತಂಥ । ಗುರುವಿನ
ಸೊಲ್ಲೆತಾದೈವ ಸರ್ವಜ್ಞ ॥ ೭ ॥
ಹರನಿಗೈಮೊಗವಿರ್ದು । ನೆರವಾಗಲೊಲ್ಲನು
ನರರೂಪುಧರಿಸಿ ಗುರುವಾಗಿ । ಬೋಧಿಪಗೆ
ಸರಿಯುಹರಕಾಣೆ ಸರ್ವಜ್ಞ ॥ ೮ ॥
ದರುಶನಗಳಾರರಿಂ । ಪುರುಷರುಮೂವರಿಂ
ಪರತತ್ವದಿರವುಬೇರೆಂದು । ತೋರಿದಾ
ಗುರುತಾನೆದೈವ ಸರ್ವಜ್ಞ ॥ ೯ ॥
ಬೊಮ್ಮವೆಂಬುದುತಾನು । ಪೊಮ್ಮಾರುದೂರವೆ?
ಒಮ್ಮೆಸದ್ಗುರುವಿನುಪದೇಶ । ದಿಂ ಮೋಕ್ಷ
ಗಮ್ಮನೆಬರ್ಕು ಸರ್ವಜ್ಞ ॥ ೧೦ ॥
ಹರತನ್ನೊಳಿರ್ಥುದನು । ಗುರುತೋರದಿರುತಿರ್ಪ
ಮರದೊಳಗೆ ಅಗ್ನಿಯಿರುತಿರ್ದು । ತನ್ನತಾ
ನರಿಯುದೇಕೆಂದ ಸರ್ವಜ್ಞ ॥ ೧೧ ॥

ಗಂಧವನುತೆಗೆವಲ್ಲಿ । ಒಂದುನೊಣವನುಕಾಣೆ
ಸಂಧಿಸಿದಮಲವಬಿಡುವಲ್ಲಿ । ನೊಣಮುತ್ತಿ
ವಂದವನೋಡು ಸರ್ವಜ್ಞ ॥ ೧೨ ॥

ನರಕ ಪಾಪಿಷ್ಠರಿಗೆ । ಸುರಲೋಕ ನಿಷ್ಠರಿಗೆ
ಗುರು ಶರಣರೊಳಗೆ ಜಗಮುಳಿದು । ಅಲ್ಲಿಂದ
ಉರಿದುಹೋಗುವುದು ಸರ್ವಜ್ಞ ॥ ೧೩ ॥

ಮೊಸರಕಡೆಯಲುಬೆಣ್ಣೆ । ಯೊಸೆದುಬರ್ಪಂದದಿ
ಹಸನಾದಗುರುವಿನುಪದೇಶ । ದಿಂ ಮೋಕ್ಷ
ವಶವರ್ತಿಯಕ್ಕು ಸರ್ವಜ್ಞ ॥ ೧೪ ॥

ಮುಂಡೆಬೋಳಾದೊಡಂ । ದಂಡಕೋಲ್ವಿಡಿದೊಡಂ
ಹೆಂಡತಿಯಬಿಟ್ಟುನಡೆದೊಡಂ । ಗುರುಮುಖವ
ಕಂಡಲ್ಲದಿಲ್ಲ ಸರ್ವಜ್ಞ ॥ ೧೫ ॥

ಊರಿನಾದಾರಿಯನು । ಯಾರುತೋರಿದೊಡೇನು?
ಸ್ವಾರಸ್ಯಪದವನರುಹಿದ । ಸದ್ಗುರುವೆ
ಆರಾಧ್ಯನಕ್ಕು ಸರ್ವಜ್ಞ ॥ ೧೬ ॥

ಮರನುದ್ದಮನುಜರಿಗೆ । ತೆರನಾವುದೆಂದರೆ
ಕರಿಗೊಂಡಬೆಳಲಹಣ್ಣಂತೆ । ಗುರುಬೋಧೆ
ಹಿರಿದಾಗಬೇಕುಸರ್ವಜ್ಞ ॥ ೧೭ ॥

ಮನವುಮುಟ್ಟಲುಗುಂಡು । ತನುವಸೋಂಕಲುಪಾಪ
ಮನವೇಗದಿಂದಗುರುಚರಣ । ಸೋಂಕಿದರೆ
ತನುಶುದ್ಧವೈಯ ಸರ್ವಜ್ಞ ॥ ೧೮ ॥

ತುಪ್ಪವಾದಾಬಳಿಕ । ಹೆಪ್ಪನೆರೆದವರುಂಟೆ?
ನಿಸ್ಪೃಹನಾದ ಗುರುವಿ । ನುಪದೇಶದಿಂ
ತಪ್ಪದುಮುಕ್ತಿ ಸರ್ವಜ್ಞ ॥ ೧೯ ॥

ಪರುಸಲೋಹವಮುಟ್ಟೆ । ವರಸೆಯಿರಬಲ್ಲುದೆ?
ಪರುಷವೆತ್ತಂಥಶಿಷ್ಯರಿಗೆ । ಗುರುವಿನಾ
ದರುಶನವೆ ಪರುಸ ಸರ್ವಜ್ಞ ॥ ೨೦ ॥

ತಾಪದಲಿಸಂಸಾರ । ಕೂಪದಲಿಬಿದ್ದವರು
ಕೂಪವನೊಡೆದುಪೊರಮಡಲು । ಗುರುಪಾದ
ಸೋಪಾನವೈಯ ಸರ್ವಜ್ಞ ॥ ೨೧ ॥
ಗುರುಪಾದಸೇವೆತಾ । ದೊರೆಕೊಂಡಿತಾದೊಡೆ
ಪಿರಿದಾದಪಾಪಪರಿಯುವುದು । ಕರ್ಪುರದ
ಗಿರಿಯುಸುಟ್ಟಂತೆ ಸರ್ವಜ್ಞ ॥ ೨೨ ॥
ದುರ್ಗಿಯಾಚಾರಿಯುಂಡಿ । ಹೆಗ್ಗಳದಶಕ್ತಿಯು ।
ಕಗ್ಗದಾಜಟ್ಟಿಮುಸುಡೀ । ಇವರಾಟ
ಸದ್ಗುರುವಿನಾಜ್ಞೆ ಸರ್ವಜ್ಞ ॥ ೨೩ ॥
ವಿಷಯಕ್ಕೆಕುದಿಯದಿರು । ಅಶನಕ್ಕೆ ಹರಿಯದಿರು
ಅಸಮಾಕ್ಷನಡಿಯಮರೆಯದಿರು । ಗುರುಪಾದ
ವಶವರ್ತಿಯಹುದು ಸರ್ವಜ್ಞ ॥ ೨೪ ॥
ಹಂದಿಯಾಚಂದನದ । ಗಂಧವನುಬಲ್ಲುದೆ?
ವಂದ್ಯವಂದನೆಯುಇಲ್ಲದ । ತನುವಿಂಗೆ
ನಿಂದ್ಯತಪ್ಪುವುದೆ? ಸರ್ವಜ್ಞ ॥ ೨೫ ॥
ಅರಿವನರಿಯದಗುರುವು । ಪರವನರಿಯದಶಿಷ್ಯ
ನೆರೆಯರಿಯದೋದುಇವುಮೂರು । ಅಂಧಕರು
ತಿರುಗಾಡಿದಂತೆ ಸರ್ವಜ್ಞ ॥ ೨೬ ॥
ಬಳ್ಳಿಕುರುಡರುಕೂಡಿ । ಹಳ್ಳದೊಳುಬಿದ್ದಂತೆ
ಒಳ್ಳೆಯಾಗುರುವಿನುಪದೇಶ । ವಿಲ್ಲದಗೆ
ಎಲ್ಲಿಯದುಮುಕ್ತಿ? ಸರ್ವಜ್ಞ ॥ ೨೭ ॥
ಹಸಿಯಸೌದೆಯತಂದು । ಅಶನಬೇಯಿಸಲಹುದೆ?
ವಿಷಯಗಳಬಿಡದಮನುಜಂಗೆ । ಗುರುಕರುಣ
ವಶವರ್ತಿಯಹುದೆ? ಸರ್ವಜ್ಞ ॥ ೨೮ ॥
ಬಂಧುಬಳಗಗಳೆಲ್ಲ । ಬಂದುಂಡುಹೋಗುವರು
ಬಂಧನವನಳಿಸಲರಿಯರು । ಗುರುವಿಂದ
ಬಂಧುಗಳುಂಟೆ? ಸರ್ವಜ್ಞ ॥ ೨೯ ॥

ಶ್ವಾನವೆಳನೀರಿನಾ। ಪಾನಕವಬಲ್ಲುದೇ?
ಹೀನಮಾನವಗೆವುಪದೇಶ। ವಿತ್ತರ್ಗೆ
ಮಾನಬಂದಪುದೆ? ಸರ್ವಜ್ಞ ॥ ೩೦ ॥
ಭಕ್ತಿಯಿಲ್ಲದಶಿಷ್ಯ। ಗೊತ್ತುಗೆಟ್ಟುಪದೇಶ
ಬತ್ತಿದಕೆರೆಯಬಯಲೊಳಗೆ। ರಾಜಾನ್ನ
ಬಿತ್ತಿಕೆಟ್ಟಂತೆ ಸರ್ವಜ್ಞ ॥ ೩೦ ॥
ಗುರುವನಿಂದಿಸಬೇಡ। ಪರರಪಳಿಯಲುಬೇಡ
ಬರೆವವರಕೂಡಹಗೆಬೇಡ। ಬಂಗಾರ
ವೆರವುತರಬೇಡಸರ್ವಜ್ಞ ॥ ೩೨ ॥
ಪರತತ್ವತನ್ನೊಳಗೆ। ಯೆರವಿಲ್ಲದಿರುತಿರೆ
ಪರದೇಶಿಯಾಗಿತಿರುಗುವ। ಯೋಗಿಯ
ಪರಮುಗುರುವೆಂಬೆಸರ್ವಜ್ಞ ॥ ೩೩ ॥
ಗುರುವನರನೆಂದವಗೆ। ಹರನಶಿಲೆಯೆಂದವಗೆ
ಕರುಣಪ್ರಸಾದವೆಂಜಲು। ಎಂಬುವಗೆ
ನರಕತಪ್ಪುವುದೆ? ಸರ್ವಜ್ಞ ॥ ೩೪ ॥
ಗುರುವಿಂದಬಂಧುಗಳು। ಗುರುವಿಂದದೈವಗಳು
ಗುರುವಿಂದಲಾದುದುಪುಣ್ಯ। ಲೋಕಕ್ಕೆ
ಗುರುವಿಂದಮುಕ್ತಿಸರ್ವಜ್ಞ ॥ ೩೫ ॥
ಹರಭಕ್ತಗಲ್ಲದೆ। ಹರಿದುಹೋಗದುಪಾಪ
ಹರಭಕ್ತಿಯುಳ್ಳಪರದೇಶಿ। ಯೆನ್ನಯಾ
ಪರಮುಗುರುವೆಂಬೆಸರ್ವಜ್ಞ ॥ ೩೬ ॥
ಒಂದೂರೊಳಿರಲುಗುರು। ವಂದನೆಯಮಾಡದೆ
ಸಂಧಿಸಿಅನ್ನವುಣುತಿರಲು। ಆಶಿಷ್ಯ
ಹಂದಿಯಂತಕ್ಕುಸರ್ವಜ್ಞ ॥ ೩೭ ॥
ಮೂರಿಟ್ಟೊಡಾರಕ್ಕು। ಆರುಹನ್ನೆರಡಕ್ಕು
ಹೇರುವಗೊಡ್ಡುಹಯನಕ್ಕು। ಗುರುಕರುಣ
ಸೇರುವಕಾಲಕ್ಕೆಸರ್ವಜ್ಞ ॥ ೩೮ ॥

ಜೀಯಸದ್ಗುರುನಾಥ । ಕಾಯಪುಸಿಯುನುತೋರಿ
ಮಾಯಪಾಶವನುಹರಿಸುತ್ತ । ಶಿಷ್ಯಂಗೆ
ತಾಯಿಯಂತಿರನೆ? ಸರ್ವಜ್ಞ ॥ ೩೯ ॥
ಉತ್ತಮದಗುರುಮುಖದಿ । ತತ್ವಮಸಿಯನೆತಿಳಿದು
ಸತ್ಯವಿದೆಂದು ನಿರ್ಧರಿಸಿ। ದಾಮೇಲೆ
ಸತ್ತುಹುಟ್ಟುವನೆ? ಸರ್ವಜ್ಞ ॥ ೪೦ ॥
ಉರಿಯುಂಡಕರ್ಪುರದ । ಸರಕುಮಾರುವರುಂಟೆ?
ಗುರುಕರುಣೆಯಿಂದ ನಿಜದೊಳಗೆ । ಬೆರೆದಾತ
ನರಕಕೂಡುವನೆ? ಸರ್ವಜ್ಞ ॥ ೪೧ ॥
ಮೂರುಕಣ್ಣೀಶ್ವರನ । ತೋರಿಕೊಡಬಲ್ಲ ಗುರು
ಬೇರಿರುವದೊಂದುತೆರವಿಲ್ಲ । ಗುರುಕರುಣ
ತೋರುವುದುಶಿವನ ಸರ್ವಜ್ಞ ॥ ೪೨ ॥
ಸಾಣೆಶ್ರೀಗಂಧವನು । ಮಾಣದೆತೇಯ್ದಂತೆ
ಜಾಣಶ್ರೀಗುರುವಿನುಪದೇಶ । ವಾದವಗೆ
ಕಾಣಿಪುದು ಮುಕ್ತಿ ಸರ್ವಜ್ಞ ॥ ೪೩ ॥
ಬೆಳಗುನುಂಗಿದ ಗುರುವಿ । ನೊಳಗುಬಲ್ಲವರಾರು
ಒಳಗಿನಾಬೆಳಗನರಿದವಗೇ। ಕೈಲಾಸ
ಕರತಳಾಮಳಕ ಸರ್ವಜ್ಞ ॥ ೪೪ ॥
ತಿರಿದುಹರಿದೂತೊರೆದು । ಕರೆದುಧರ್ಮವಮಾಡೆ
ಪರಿಣಾಮವಕ್ಕುಪದವಕ್ಕು । ಗುರುಪಾದ
ನೆರೆಮನೆಯಕ್ಕು ಸರ್ವಜ್ಞ ॥ ೪೫ ॥
ಹೊಲಬನರಿಯದಗುರುವು । ತಿಳಿಯಲರಿಯದ ಶಿಷ್ಯ ।
ನೆಲೆಯನಾರಯ್ಯದುಪದೇಶ । ಅಂಧಕನು
ಕೊಳನಹೊಕ್ಕಂತೆ ಸರ್ವಜ್ಞ ॥ ೪೬ ॥
* * * * * ॥ ೪೭ ॥
ಹೇಳಿದ್ದೆಹೇಳುವರು । ಕೇಳಿದ್ದೆಕೇಳುವರು
ಕೇಳಿದ್ದೆಕೇಳಿ ಸುಖಿಸುವರು । ಗುರುಗಳು
ಹೇಳುವತರಬೇರೆ ಸರ್ವಜ್ಞ ॥ ೪೮ ॥

## ೩. ಲಿಂಗಾತಿಶಯ ಪದ್ಧತಿ.

ಕಲ್ಲಿನಲಿಖಂಡದಲಿ । ಬಳ್ಳದಲಿಹಿಕ್ಕೆಯಲಿ
ಎಲ್ಲಿಭಾವಿಸಿದೊಡಲ್ಲಿಪ್ಪ । ಕುರುಹುತಾ
ಬಲ್ಲೆನು ಈಗ ಸರ್ವಜ್ಞ ॥ ೧ ॥
ಲಿಂಗದಾನದಿಯಲ್ಲಿ । ಲಿಂಗವಿದ್ದೆಡೆಯಲ್ಲಿ
ಲಿಂಗದಲಿಜಗವು ಅಡಗಿಹುದು । ಲಿಂಗವನು
ಹಿಂಗಿಹರುವುಂಟೆ? ಸರ್ವಜ್ಞ ॥ ೨ ॥
ಓಂಕಾರಮುಖದಲ್ಲಿ । ಆಕಾರತಾನಿಲ್ಲ
ಆಕಾಶತಳವಮಿಾರಿಹುದು । ಹರಿಯಜರು
ತಾಕಾಣರಯ್ಯ ಸರ್ವಜ್ಞ ॥ ೩ ॥
ಒಬ್ಬನಲ್ಲದೆಜಗಕೆ । ಇಬ್ಬರುಂಟೇ? ಮರುಳೆ
ಒಬ್ಬನೇಸರ್ವಜಗಕೆಲ್ಲ । ಕರ್ತಾರ
ನೊಬ್ಬನೇದೈವಸರ್ವಜ್ಞ ॥ ೪ ॥
ಉಣಲಡಿಗೆಘನವಾಗಿ ಕಣುಕತಾನೊಂದಯ್ಯ
ಮಣಿಮಂತ್ರಔಷಧಿಯುಮೂರು । ಲೋಕಕ್ಕೆ
ತ್ರಿಣಯನನೆದೈವಸರ್ವಜ್ಞ ॥ ೫ ॥
ಹರಿಯಜರೆಂಬುವರು । ಹರನಿಂಗೆ ಸರಿಯಹರೆ?
ಅರಸಿಂಗೆಆಳು ಸರಿಯಹನೆ? ಪಶುಪತಿಗೆ
ಸರಿಯಹರಕಾಣೆಸರ್ವಜ್ಞ ॥ ೬ ॥
ಹುಟ್ಟಿಸುವನಜನೆಂಬ । ಕಷ್ಟದನುಡಿಯೇಕೆ?
ಹುಟ್ಟಿಪನಶಿರವಶಿವನರಿದ । ಆಶಿರವ
ಹುಟ್ಟಿಸನದೇಕೆ? ಸರ್ವಜ್ಞ ॥ ೭ ॥
ಷಡುದರುಶನಾದಿಗಳು । ಮೃಡನವೊಡಲಾದುವು
ಪೊಡಮಡುತನಿಗಮವರಸುವ । ಅಭವನ
ಅಡಿಗೆಣೆಯಾರು? ಸರ್ವಜ್ಞ ॥ ೮ ॥

ದೇಶಕ್ಕೆಸಜ್ಜನನು । ಹಾಸ್ಯಕ್ಕೆಹನುಮಂತ
ಕೇಶವಭಕ್ತರೊಳಗೆಲ್ಲ । ಮೂರುಕ
ಣ್ಣೀಶನೇದೇವಸರ್ವಜ್ಞ ॥ ೯ ॥
ಉಂಬಳಿಯುಯಿರುವಾಗ । ಕಂಬಳಿಯಹೊದಿಯುವರೆ?
ಶಂಭುವಿರಲಾಗಿಮತ್ತೊಂದು । ದೈವವನು
ನಂಬುವನೆಹೆಡ್ಡಸರ್ವಜ್ಞ ॥ ೧೦ ॥
ಎಂಜಲುಆಶೌಚ । ಸಂಜೆಯೆಂದೆನಬೇಡ
ಕುಂಜರವುವನದೆಮೆರೆವಂತೆ । ಬಿಡದೆನಿ
ರಂಜನನುನೀನೆಸರ್ವಜ್ಞ ॥ ೧೧ ॥
ಎಂಜಲದುಹೊಲೆಯಲ್ಲ । ಸಂಜೆಗತ್ತಲೆಯಲ್ಲ
ಅಂಜಿಕೆಯಿಲ್ಲಭಯವಿಲ್ಲ । ಜ್ಞಾನವೆಂ
ಬಂಜನವಿರಲುಸರ್ವಜ್ಞ ॥ ೧೨ ॥
ಭೂತೇಶಗೆರಗುವನು । ಜಾತಿಮಾದಿಗನಲ್ಲ
ಜಾತಿಯಲಿಹುಟ್ಟಿಶಿವನಿಗೆ । ಶರಣೆನ್ನ
ದಾತಮಾದಿಗನುಸರ್ವಜ್ಞ ॥ ೧೩ ॥
ಏತರಾಹೂವಾಗೆ । ನಾತವಿದ್ದರೆಸಾಕು
ಜಾತಿವಿಜಾತಿಯೆನಬೇಡ । ಶಿವನೊಲಿಯ
ಲಾತನೇಜಾತಸರ್ವಜ್ಞ ॥ ೧೪ ॥
ಸಾಲುವೇದಗಳೋದಿ । ಶೀಲದಲಿಶುಚಿಯಾಗಿ
ಶೂಲಿಯಪಾದಮರೆದರೆ । ಗಿಳಿಯೋದಿ
ಹೇಲುಬಿದ್ದಂತೆಸರ್ವಜ್ಞ ॥ ೧೫ ॥
ಹರಿದಲೆಯುಬ್ರಹ್ಮಂಗೆ । ಕುರಿದಲೆಯುದಕ್ಷಂಗೆ
ನೆರಹತ್ತುಜನನಹರಿಗೆ । ಈಮೂವರೂ
ಹರನಿಗೆಣೆಯಹರೆ? ಸರ್ವಜ್ಞ ॥ ೧೬ ॥
ಕುಲಗೆಟ್ಟವರಚಿಂತೆ । ಯೊಳಗಿಪ್ಪರಂತಲ್ಲ
ಕುಲಗೆಟ್ಟಶಿವನಮರೆಹೊಕ್ಕ । ಋಷಿಗಳಿಗೆ
ಕುಲಗೋತ್ರವುಂಟೆ? ಸರ್ವಜ್ಞ ॥ ೧೭ ॥

* * * * * ॥ ೧೮ ॥

ಜಾತಿಹೀನನಮನೆಯ ಜ್ಯೋತಿತಾಹೀನವೆ?
ಜಾತಂಗೆಜಾತನೆನಲೇಕೆ? ಅರುಹುವಿಡಿ
ದಾತನೇಜಾತ ಸರ್ವಜ್ಞ ॥ ೧೯ ॥

ದೇಹಿಯೆನಬೇಡನಿ । ರ್ದೇಹಿ ಜಂಗಮದೇವ
ದೇಹಗುಣದಾಸೆಯುಳಿದೊಡೆ । ಆತನಿ
ರ್ದೇಹಿಕಾಣಯ್ಯಸರ್ವಜ್ಞ ॥ ೨೦ ॥

ಗಂಗೆಗೋದಾವರಿ । ತುಂಗಭದ್ರೆಯಜಲದೆ
ಹಿಂಗದೆಮುಳುಗಿ ಫಲವೇನು? ನಿನ್ನಲ್ಲಿ
ಲಿಂಗದರಿವಿಲ್ಲಸರ್ವಜ್ಞ ॥ ೨೧ ॥

ಮಾಯೆಮೋಹವನೆಚ್ಚಿ । ಕಾಯವನುಕರಗಿಸುತ
ಆಯಾಸಗೊಳುತಲಿರಬೇಡ । ಓಂನಮಶ್ಶಿ
ವಾಯಎಂದೆನ್ನುಸರ್ವಜ್ಞ ॥ ೨೨ ॥

ಅಕ್ಕರವುತರ್ಕಕ್ಕೆ । ಲೆಕ್ಕವದುಗಣಿತಕ್ಕೆ
ಮಿಕ್ಕವೋದುಗಳುತಿರುಪಕ್ಕೆ । ಮೋಕ್ಷಕಾ
ರಕ್ಕರವೆಸಾಕುಸರ್ವಜ್ಞ ॥ ೨೩ ॥

ಮುನಿವಂಗೆಮುನಿಯದಿರು । ಕನಿವಂಗೆಕನಿಯದಿರು
ಮನಸಿಜಾರಿಯನು ಮರೆಯದಿರು । ಶಿವನಕೃಪೆ
ಮನದಿಘನವಕ್ಕು ಸರ್ವಜ್ಞ ॥ ೨೪ ॥

ಎಲ್ಲರನುನೆರೆಬೇಡಿ । ಹಲ್ಲುಬಾಯ್ದೆರೆಯುವರೆ?
ಬಲ್ಲದಶಿವನ ಭಜಿಸಿದರೆ । ಶಿವತಾನು
ಇಲ್ಲೆನ್ನಲರಿಯ ಸರ್ವಜ್ಞ ॥ ೨೫ ॥

ನರರಬೇಡುವದೈವ । ವರವೀಯಬಲ್ಲುದೆ?
ತಿರಿವರನುತಿರಿದರೇನು? ಅದರಿಂದ
ಹರನಬೇಡುವುದುಸರ್ವಜ್ಞ ॥ ೨೬ ॥

ಭ್ರಷ್ಟದೈವಕೆಬಾಯ । ಬಿಟ್ಟಲ್ಲಿಫಲವಿಲ್ಲ
ಸೃಷ್ಟಿಗೀಶ್ವರನ ಭಜಿಸಲ್ಕೆ । ಮುಂದಕ್ಕೆ
ಇಷ್ಟಾರ್ಥವೀವ ಸರ್ವಜ್ಞ ॥ ೨೭ ॥

ಇಂದ್ರನಾನೆಯನೇರಿ । ಪೊಂದನೂಕೊಡಲರಿಯ
ಚಂದ್ರಶೇಖರನು ಮುದಿಯೆತ್ತ । ನೇರಿಬೇ
ಕೆಂದುದನು ಕೊಡುವಸರ್ವಜ್ಞ ॥ ೨೮ ॥
ಸಾರವನುಬಯಸುವೊಡೆ । ಕಾರವನುಧರಿಸುವರೆ?
ಮಾರಸಂಹರನನೆನೆದರೆ । ಮೃತ್ಯುವು
ದೂರಕ್ಕೆದೂರಸರ್ವಜ್ಞ ॥ ೨೯ ॥
ಕಾಯಿಕಮಲವೆಸಂಜ್ಞೆ । ಜೀವರತ್ನವೆಲಿಂಗ
ಭಾವಪುಷ್ಪದಲಿಶಿವಪೂಜೆ । ಮಾಡುವರ
ದೇವರೆಂದೆಂಬೆ ಸರ್ವಜ್ಞ ॥ ೩೦ ॥
ಓದುವಾದಗಳೇಕೆ? ಗಾದೆಯಾಮಾತೇಕೆ?
ವೇದಪೌರಾಣತತಿಯೇಕೆ? ಲಿಂಗದ
ಹಾದಿಯರಿದವಗೆಸರ್ವಜ್ಞ ॥ ೩೧ ॥
ಒಪ್ಪದನುಡಿಯೇಕೆ? ಪುಷ್ಪವೇರಿಸಲೇಕೆ?
ಅರ್ಪಿತದಗೊಡವೆತನಗೇಕೆ? ಲಿಂಗದ
ಒಪ್ಪನರಿದವಗೆಸರ್ವಜ್ಞ ॥ ೩೨ ॥
ಮೆಟ್ಟಿದಕಲ್ಲಿಂಗೆ । ಪೊಟ್ಟಪತ್ರೆಯಹಾಕಿ
ಕಟ್ಟಿದಾಲಿಂಗವಡಿಮಾಡಿ । ಶರಣೆಂಬ
ಭ್ರಷ್ಟರನು ಕಂಡ್ಯಸರ್ವಜ್ಞ ॥ ೩೩ ॥

## ೪. ಇಷ್ಟಲಿಂಗಪದ್ಧತಿ.

ಸೃಷ್ಟಿಯೆಲ್ಲವಮನವು । ಮುಟ್ಟಿಹುದುನಿಮಿಷಕ್ಕೆ
ಮುಟ್ಟಿಅಭಯವನು ಇಟ್ಟು । ಮೂರೊಂದೊಂದು
ನಿಟ್ಟಿಪ್ಪನೈಸೆ ಸರ್ವಜ್ಞ ॥ ೧ ॥
ಶಿವಪೂಜೆಮಾಡುವುದು । ಶಿವನಕೊಂಡಾಡುವುದು
ಶಿವನನೆನಹುಗಳ ಬಿಡದಿಹುದು । ಮರ್ತ್ಯರಿಗೆ
ಶಿವಲೋಕದಿರವು ಸರ್ವಜ್ಞ ॥ ೨ ॥

ಒಮ್ಮನದಿಶಿವಪೂಜೆ। ಗಮ್ಮನೇಮಾಡುವುದು
ಇಮ್ಮನವನಿಡಿದು ಕೆಡಬೇಡ। ವಿಧಿವಶವು
ಗಮ್ಮನೇಬಕ್ಕು ಸರ್ವಜ್ಞ ॥ ೩ ॥
ಅಂಗವನು ಲಿಂಗವನು। ಸಂಗಯಿಸಲೇತಕ್ಕೆ?
ಲಿಂಗದೊಳುನೆನಹುಘನವಾಗೆ। ಆಲಿಂಗ
ಅಂಗವಾಗಿಹುದು ಸರ್ವಜ್ಞ ॥ ೪ ॥
ಲಿಂಗದಾಗುಡಿಲೇಸು। ಗಂಗೆಯಾತಡಿಲೇಸು
ಲಿಂಗಸಂಗಿಗಳನಡೆಲೇಸು। ಅವರೊಳು
ಸಂಗವೇಲೇಸು ಸರ್ವಜ್ಞ ॥ ೫ ॥
ಲಿಂಗದಲಿನಡೆಯಾಗಿ। ಲಿಂಗದಲಿ ನುಡಿಯಾಗಿ।
ಲಿಂಗದಲಿನೋಟನಡೆಕೂಟ। ವಾದವನು
ಲಿಂಗವೇಅಕ್ಕು ಸರ್ವಜ್ಞ ॥ ೬ ॥
ಕಂಗಳಿಛ್ಛೆಗೆಹರಿದು। ಭಂಗಗೊಳದಿರು ಮನವೆ।
ಲಿಂಗದಲಿಮನವನಿಲಿಸಿ। ಸತ್ಯಮಿರೆ
ಲಿಂಗವದುತಾನೆ ಸರ್ವಜ್ಞ ॥ ೭ ॥
ಇಷ್ಟಲಿಂಗದಿಮನವ। ನೆಟ್ಟನೇನಿಲಿಸಿದರೆ
ಕೆಟ್ಟಭ್ರಮೆಯೊಳಗೆ ಮುಳುಗನು। ಕರ್ಮದ
ಬಟ್ಟೆಗೆಹೋಗ ಸರ್ವಜ್ಞ ॥ ೮ ॥
ನಿಷ್ಠೆಯಿದ್ದೊಡೆಶಿವನು। ಕಟ್ಟಿಕೊಂಡೊಳಗಿರ್ಪ।
ನಿಷ್ಠೆಯಿಲ್ಲದವನು ಭಜಿಸಿದರೆ। ಆ ಶಿವನು
ಬಟ್ಟಬಯಲಂತೆ ಸರ್ವಜ್ಞ ॥ ೯ ॥
ಅಷ್ಟವಿಧದರ್ಚನೆಯ। ನೆಷ್ಟುಮಾಡಿದೊಡೇನು?
ನಿಷ್ಠೆಯಿಲ್ಲದವಮಾಡಿದರೆ। ಆಪೂಜೆ
ನಷ್ಟಕಾಣಯ್ಯ ಸರ್ವಜ್ಞ ॥ ೧೦ ॥
ಎಷ್ಟುಬಗೆ ಯಾರತಿಯ। ಮುಟ್ಟಿಸಿಯೆಫಲವೇನು?
ನಿಷ್ಠೆಯಿಲ್ಲದನ ಶಿವಪೂಜೆ। ಹಾಳೂರು
ಕೊಟ್ಟಿಗುರಿದಂತೆ ಸರ್ವಜ್ಞ ॥ ೧೧ ॥

ದೆಸೆಯೆಂಟುದಿಕ್ಕಿನಲಿ । ಯೆಸೆವಗಿಣ್ಣಿಲುಗಿಂಡಿ
ಹುಸಿದುಮಾಡುವನ ಶಿವಪೂಜೆ । ಕಂಚುಗರು
ಪಸರವಿಟ್ಟಂತೆ ಸರ್ವಜ್ಞ ॥ ೧೨ ॥
ಎಣಿಸುತಿರ್ಪುದು ಬೆರಳು । ಗಣಿಸುತಿರ್ಪುದುಜಿಹ್ವೆ
ಮನಹೋಗಿ ಹಲವುನೆನೆದರೆ । ಹಾಳೂರ
ಶುನಕನಂತಕ್ಕು ಸರ್ವಜ್ಞ ॥ ೧೩ ॥
ಆಳುತೇಳುವಬೆರಳು । ಜಾಳುನಿಡುಕುವಬಾಯಿ
ಮೇಳದೊಳು ತೊಡಚಿಬಿಡದೆ । ಎಸಗುವಜಪವು
ಹಾಳುಮನೆಯಂತೆ ಸರ್ವಜ್ಞ ॥ ೧೪ ॥
ಬತ್ತೀಸಬತ್ತಿಯನು । ಹತ್ತಿಸಿಯೆಫಲವೇನು?
ನಿತ್ಯನೆಲೆಗೊಳದೆ ಭಜಿಸುತಿರೆ । ಆಪೂಜೆ
ಬತ್ತಿಕೇಡೆಂದ ಸರ್ವಜ್ಞ ॥ ೧೫ ॥
ಹಲವನೋದಿದೊಡೇನು? ಚೆಲುವನಾದೊಡದೇನು?
ಕುಲಚಲವು ಇದ್ದು ಫಲವೇನು? ಶಿವಲಿಂಗ
ನೊಲುಮೆಯಿಲ್ಲದಗೆ ಸರ್ವಜ್ಞ ॥ ೧೬ ॥
ಕೊಲುವಕೈಯೊಳುಪೂಜೆ । ಮೆಲುವಬಾಯೊಳು ಮಂತ್ರ
ಸಲೆಪಾಪವೆರಡು ತನುವಿನಲಿ । ಪೂಜಿಪನು
ಹೊಲೆಯಕಾಣಯ್ಯ ಸರ್ವಜ್ಞ ॥ ೧೭ ॥
ಕಂಡವರಕಂಡುತಾ । ತುಂಡುಲಿಂಗವಕಟ್ಟಿ
ಕೊಂಡಾಡಲರಿಯದಧಮುಂಗೆ । ಆಲಿಂಗ
ಕೆಂಡದಂತಕ್ಕು ಸರ್ವಜ್ಞ ॥ ೧೮ ॥
ಕಟ್ಟಲುಂಬಿಡಲುಶಿವ । ಬಟ್ಟಲನು ಕದ್ದನೆ?
ಕಟ್ಟಲೂಬೇಡ ಬಿಡಬೇಡ । ಕಣ್ಣುಮನ
ಕಟ್ಟಿದರೆಸಾಕು ಸರ್ವಜ್ಞ ॥ ೧೯ ॥
ತನ್ನಲ್ಲಿಶಿವನಿರಲು । ಮನ್ನಿಸಲ್ಕರಿಯದೆ
ಬಿನ್ನಣದಿಕಡೆದ ಪ್ರತಿಮೆಗೆ । ಕೈಮುಗಿವ
ಕುನ್ನಿನೋಡೆಂದ ಸರ್ವಜ್ಞ ॥ ೨೦ ॥

ಕಲ್ಲುಕಾಷ್ಠದಲಿಹನು। ಎಲ್ಲೆಲ್ಲಿಶಿವನಿಹನು
ಎಲ್ಲಿಯುಮಾತು ಯೆನಬೇಡ। ನಿಷ್ಠೆಯಿ
ದ್ದಲ್ಲಿ ಇಹನೆಂದ ಸರ್ವಜ್ಞ ॥ ೨೧ ॥
ಲಿಂಗಪೂಜಿಸುವಾತ। ಜಂಗಮಕೆನೀಡಿದರೆ
ಲಿಂಗದಾಕ್ಷೇಮಘನವಕ್ಕು। ಆಲಿಂಗ
ಹಿಂಗದೇಇಹುದು ಸರ್ವಜ್ಞ ॥ ೨೨ ॥
ಆದಿಯಾಲಿಂಗವನು। ಭೇದಿಸಲ್ಕರಿಯದೆ
ಹಾದಿಯಡಿಮಾಡಿನಮಿಸುವ। ಮನುಜರೇ
ಮಾದಿಗರುನೋಡುಸರ್ವಜ್ಞ ॥ ೨೩ ॥
ಉಣಬಂದಜಂಗಮಕೆ। ವುಣಲಿಸದೆಅಂತಿರಿಸಿ
ಉಣದಿರ್ಪಕಲ್ಲಿಗೆಡೆಯೂಡಿ। ನಮಿಸುವಾ
ಬಣಗುಗಳನೋಡುಸರ್ವಜ್ಞ ॥ ೨೪ ॥
ಹುಸಿವವನದೇಹವು। ಮಸಿಮಣ್ಣದೆಂತೆನಲು
ಮುಸುಕಿರ್ದಮಲವನೊಳಗಿರಿಸಿ। ಪುಷ್ಪವನು
ಹಸಮಾಡಿದಂತೆಸರ್ವಜ್ಞ ॥ ೨೫ ॥
ಲಿಂಗಕ್ಕೆತೋರದೆಯೆ। ಅಂಗಕ್ಕೆಕೊಂಡರೆ
ತಿಂಗಳಲಿಸತ್ತಹಳೆನಾಯಿ। ಮಾಂಸವನು
ನುಂಗಿದಂತಕ್ಕುಸರ್ವಜ್ಞ ॥ ೨೬ ॥
ಲಿಂಗಪ್ರಸಾದವನು। ಅಂಗಕ್ಕೆಕೊಂಬುವರು
ಗಂಗಾಳದೊಳಗೆಕೈತೊಳೆದು। ಚೆಲ್ಲುವಾ
ಮಂಗಗಳನೋಡುಸರ್ವಜ್ಞ ॥ ೨೭ ॥
ಲಿಂಗಕ್ಕೆತೋರಿಸಿಯೆ। ನುಂಗುವಾತನೆಕೇಳು
ಲಿಂಗವೇಉಂಡುಹೊರೆಗೆಡಹಿ। ತೆಲೊಪಾಪಿ
ಜಂಗಮಕೆನೀಡುಸರ್ವಜ್ಞ ॥ ೨೮ ॥
ಲಿಂಗಕ್ಕೆತೋರಿಸದೆ। ನುಂಗಿದೊಡೆಏನಹುದು?
ಭಂಗಬಂಧನವು ಘನವಹುದು। ಆಲಿಂಗ
ಹಿಂಗದಲೆಯಹುದುಸರ್ವಜ್ಞ ॥ ೨೯ ॥

ಈಶಪ್ರಸಾದವನು । ಸೂಸದಲೆತಾಕೊಳ್ಳೆ
ಶಾಶ್ವತದಪದವಿತಾನಕ್ಕು । ಜಗಕೆಲ್ಲ
ಈಶ್ವರನೆಅಕ್ಕುಸರ್ವಜ್ಞ ॥ ೩೦ ॥
ಹರಹರಾಎನ್ನದೇ । ಪರಶಿವನನೆನೆಯದೆ
ಸ್ಮರಹರನಕರುಣೆತನಗಹುದೆ? ಜಗದೊಳಗೆ
ಇರುತಿಹುದೆ? ಕಷ್ಟಸರ್ವಜ್ಞ ॥ ೩೧ ॥
ಅಂಗದಿಚೆಗೆಹರಿದು । ಭಂಗಗೊಳದಿರುಮನುಜ
ಲಿಂಗದಲಿನೆನಹುನಿಲಿಸೆ । ಸತ್ಯದಿನೀನು
ಲಿಂಗವೇಅಪ್ಪೆಸರ್ವಜ್ಞ ॥ ೩೨ ॥
ಲಿಂಗದಾದರುಶನವು । ಲಿಂಗದಾಸ್ಪರ್ಶನವು
ಲಿಂಗಸಹಸರ್ವಭೋಗ । ವಾದಾತ
ಲಿಂಗವೇಅಕ್ಕುಸರ್ವಜ್ಞ ॥ ೩೩ ॥
ಲಿಂಗದಲಿನೆನಹಾಗಿ । ಲಿಂಗದಲಿಮನವಾಗಿ
ಲಿಂಗದಲಿನೆಟ್ಟನುಡಿಯಾಗಿ । ಆದವನು
ಲಿಂಗವೇಅಕ್ಕುಸರ್ವಜ್ಞ ॥ ೩೪ ॥

## ೫. ಭಕ್ತಪದ್ಧತಿ.

ನೋಟಲಿಂಗಗಳಲ್ಲಿ । ಕೂಟಜಂಗಮದಲ್ಲಿ
ನಾಟಕವುಸದ್ಗುರುವಿನಲ್ಲಿ । ಇಹಭಕ್ತನಾ
ಆಟವಾಶ್ಚರ್ಯಸರ್ವಜ್ಞ ॥ ೧ ॥
ಭಕ್ತರೊಡನಾಡುವುದು । ಭಕ್ತರೊಡಗೂಡುವುದು
ಭಕ್ತರೊಳುಭಕ್ತಿಬೆರಸಿರ್ಪ । ಭಕ್ತತಾಂ
ಮುಕ್ತನೆನಿಸುವನುಸರ್ವಜ್ಞ ॥ ೨ ॥
ಅಲಸದಿರುಗುರುಭಕ್ತಿ । ಹುಲುಸುಂಟೆ? ಕೇಳಯ್ಯ
ಬಲುಕವೆಗಳೊಡೆದುಬುಡದಿಂದ । ತುದಿತನಕ
ಹಲಸುಕಾತಂತೆಸರ್ವಜ್ಞ ॥ ೩ ॥

ಜಂಗಮಕೆವಂಚಿಸನು । ಹಿಂಗದಿರ ಲಿಂಗವನು
ಸಂಗಸಜ್ಜನರ ಪರಸತಿಯ । ನೋಡದಗೆ
ಭಂಗವೇಇಲ್ಲಸರ್ವಜ್ಞ ॥ ೪ ॥
ಕಾಚುವೀಳೆಯಕಿಂಪು । ಲೋಚನಕ್ಕಂಜನವು
ಲಾಂಛನದಕಳೆಯುಜಗಕಿಂಪು । ಭಕ್ತಂಗೆ
ಆಚಾರವಿಂಪುಸರ್ವಜ್ಞ ॥ ೫ ॥
ಪರುಸಕಬ್ಬಿಣಕರಗಿ । ಕರಡಿಗೆಯೊಳಿರುವುದೇ ?
ಹರಭಕ್ತಿಯುಳ್ಳಮಹಿಮ । ಸಂಸಾರದಲಿ
ಎರಕವಾಗಿಹನೆ ? ಸರ್ವಜ್ಞ ॥ ೬ ॥
ಕರ್ಮಿಗಾಶಿವಭಕ್ತಿ । ವರ್ಮದೊರೆಕೊಂಬುವುದೆ?
ಚರ್ಮವನುತಿಂಬಶುನಕಂಗೆ । ಪಾಯಸದ
ಕೂರ್ಮೆಯೇಕೈಯ? ಸರ್ವಜ್ಞ ॥ ೭ ॥
ಗುರಿಯತಾಗದಕೋಲ । ನರೆನೂರನೆಚ್ಚೇನು ?
ಬರಡಿಗೆ ಭಕ್ತಭಜಿಸಿದರೆ । ಅದುತಾನು
ಇರಲರಿಯದಯ್ಯ ಸರ್ವಜ್ಞ ॥ ೮ ॥
ಜ್ವರಬಂದಮನುಜಂಗೆ । ನೊರೆವಾಲುವಿಷವಕ್ಕು
ನರಕದಲಿಬೀಳ್ವ ಮನುಜಂಗೆ । ಶಿವಭಕ್ತಿ
ಹಿರಿದಾಗದೆಂದ ಸರ್ವಜ್ಞ ॥ ೯ ॥
ಸತಿಯುರಾದೊಡೆಯೇನು? ಸುತರುಹುಟ್ಟಿದರೇನು?
ಶತನೂರುಧನಗಳಿಸಲೇನು? । ಭಕ್ತಿಯಾ
ಗತಿಯಿಲ್ಲದವಗೆ ಸರ್ವಜ್ಞ ॥ ೧೦ ॥
ಆಹಾರವುಳ್ಳಲ್ಲಿ । ಆಹಾರಘನವಕ್ಕು
ಆಹಾರಬೆಳಗನರಿದಿರ್ಪ । ಶೆಟ್ಟಿಯಾ
ಬೇಹಾರವಕ್ಕು ಸರ್ವಜ್ಞ ॥ ೧೧ ॥
ಕಾಯಿಕದಭಕ್ತನಾ । ಆಯತವನೋಡಿದರೆ
ಕಾಯಕವುಬರಿದೆಬೆಳಗಾಗಿ । ಕರ್ಪುರದ
ಕಾಯಕವೆಬರ್ಕು ಸರ್ವಜ್ಞ ॥ ೧೨ ॥

ಕಡುಭಕ್ತನಾಗಲಿ । ಜಡದೇಹಿಯಾಗಲಿ
ನಡೆವವೃತ್ತಿಯಲಿಲ್ಲದಿರಲು । ಆಭಕ್ತಿ
ಹುಡಿಯಪ್ಪುದೈಯ ಸರ್ವಜ್ಞ ॥ ೧೩ ॥
ಕಾಯಕಮುಲವೆಸೆಜ್ಜೆ । ಜೀವಆತ್ಮದಲಿಂಗ
ಭಾವಪುಷ್ಪದಲಿಶಿವಪೂಜೆ । ಮಾಡುವರ
ದೇವರೆಂದರಿಯೊ ಸರ್ವಜ್ಞ ॥ ೧೪ ॥
ರುದ್ರಾಕ್ಷಿಮಾಲೆಯನು । ಹೊದ್ದುಧರಿಸಿದವರ್ಗೆ
ಹೊದ್ದದುರುಪಾಪವಾಮೇಲೆ । ಸಾಕ್ಷಾತು
ರುದ್ರನೇಯಕ್ಕು ಸರ್ವಜ್ಞ ॥ ೧೫ ॥
ನವನಾಳವನುಕಟ್ಟಿ । ಶಿವಧ್ಯಾನದೊಳಗಿರಲು
ನವಖಂಡಪೃಥ್ವಿಯೊಳಗಣ । ಮಾತೆಲ್ಲ
ಕಿವಿಯೊಳಗಿಹುದು ಸರ್ವಜ್ಞ ॥ ೧೬ ॥
ಹರಕೊಟ್ಟಕಾಲಕ್ಕೆ । ಹರನರೂಪಿಗೆನೀಡು
ಹರದೆಯರುಸುತರು ನೆರೆಸವಿದು । ತಾ ಸವಿದು
ಹರನಭಜಿಸುವುದು ಸರ್ವಜ್ಞ ॥ ೧೭ ॥
ಬಾಲಯವ್ವನಪ್ರೌಢ । ಲೋಲನಹಭಕುತನು
ಏಳುತಲಿನುಡಿವುತಿರಬೇಡ । ಅನುದಿನವು
ಶೂಲಿಯನೆನೆವ ಸರ್ವಜ್ಞ ॥ ೧೮ ॥
ದೇವನನುನೆನೆದರೆ । ಯಾವುದೂತನಗುಂಟು ।
ದೇವನನುನೆನೆಯದಧಮಂಗೆ । ಮುಂದಿನ್ನು
ಯಾವುದೂಯಿಲ್ಲ ಸರ್ವಜ್ಞ ॥ ೧೯ ॥
ಕರಿಗೆಕೇಸರಿವೈರಿ । ದುರಿತಕ್ಕೆಹರವೈರಿ
ಉರವಣಿಸಿಬರುವಸಂಸಾರ । ದುಃಖಕ್ಕೆ
ಹರನಾಮವೈರಿ ಸರ್ವಜ್ಞ ॥ ೨೦ ॥
ಲಜ್ಜೆನಾಚಿಕೆತೊರೆದು । ಹೆಜ್ಜೆಯನುಸಾಧಿಪನೆ ?
ಸಜ್ಜೆಶಿವದಾರಧರಿಸಿರ್ಪ । ಶರಣರ
ಹೆಜ್ಜೆಯೊಳಗಿರಿಸು ಸರ್ವಜ್ಞ ॥ ೨೧ ॥

ಕಲ್ಲುಕಲ್ಲಲಿಕಟ್ಟಿ । ಕಲ್ಲಲ್ಲಿಮನೆಮಾಡಿ
ಕಲ್ಲಮೇಲ್ಕಲ್ಲಕೊಳ್ಳುವರು । ಮನುಜರು
ಕಲ್ಲಿಗೆರಗುವರು ಸರ್ವಜ್ಞ ॥ ೨೨ ॥
ನಂಬುವರು ನಂಬುವರು । ಯೆಂಬುವುದುನಾಡೆಲ್ಲ
ಸಂಬಾರವರೆವಬಲುಕಲ್ಲು । ಹರನೆಂದು
ನಂಬುವರುಯಾರು? ಸರ್ವಜ್ಞ ॥ ೨೩ ॥
ಕಲ್ಲುಗುಂಡಿನಮೇಲೆ । ಮಲ್ಲಿಗೆಯಅರಳಿಕ್ಕಿ
ನಿಲ್ಲದಲೆಹಣೆಯ ಬಡಿವರ್ಗೆ । ಬಗುಟು
ಅಲ್ಲದಿನ್ನಿಲ್ಲ ಸರ್ವಜ್ಞ ॥ ೨೪ ॥
ಸತ್ಯವಂತರನೀನು । ಸತ್ತರೆಂದೆನಬೇಡ
ಹೆತ್ತಮ್ಮಮಗನಕರೆದಂತೆ । ಕೈಲಾಸ
ಕೆತ್ತಿಕೊಳ್ಳುವರು ಸರ್ವಜ್ಞ ॥ ೨೫ ॥
ಒಡೆಯರೆಂದೆನಲೇಕೆ? ತಡೆವುತ್ತನಿಲಲೇಕೆ?
ಮೃಡರೂಪನೆನಿಸಿಕೊಳಲೇಕೆ? ಜಂಗಮಕೆ
ಕಡೆಯಿಲ್ಲವೇಕೆ? ಸರ್ವಜ್ಞ ॥ ೨೬ ॥
ಮಂಡೆಬೋಳಾದವರ । ಕಂಡುನಂಬಲುಬೇಡ
ಖಂಡಿತವಪ್ಪ ಪರತತ್ವ । ವುಳ್ಳವರ
ಕಂಡರೇನಂಬು ಸರ್ವಜ್ಞ ॥ ೨೭ ॥
ಕಾಶಿಕಂಚಡಿಯೇಕೆ? ಆಸುರದಜಡೆಯೇಕೆ?
ಕೇಶಗಳಕಿತ್ತುಕೊಳಲೇಕೆ? ಮನಸಿನ
ಆಶೆಬಿಡುವನಕ ಸರ್ವಜ್ಞ ॥ ೨೮ ॥
ನಿತ್ಯನೇಮಗಳೇಕೆ? ಮತ್ತೆಪೂಜೆಗಳೇಕೆ?
ನೆತ್ತಿಬೋಳೇಕೆ? ಜಡೆಯೇಕೆ? ವದನದಲಿ
ಸತ್ಯಮುಳ್ಳವಗೆ ಸರ್ವಜ್ಞ ॥ ೨೯ ॥
ಜಡೆಯಕಟ್ಟಲುಬಹುದು । ಕಡವಸವನುಡಬಹುದು
ಬಿಡಪೆದೇಗುಲದಿಯಿರಬಹುದು । ಕರಣಗಳ
ತಡೆಯುವುದುಕಷ್ಟ ಸರ್ವಜ್ಞ ॥ ೩೦ ॥

## ೬. ಮಾಹೇಶ್ವರಪದ್ಧತಿ.

ಆರರಟ್ಟುಳಿಯನ್ನು । ಮೂರುಕಂಟಕವನ್ನು
ಏರಿದಾಜನ್ವನವತಡೆದರೆ । ಶಿವತಾನು
ಬೇರೆಯಿಲ್ಲೆಂದ ಸರ್ವಜ್ಞ ॥ ೧ ॥
ವಂಶವನುಕೂಡನು । ಹಿಂಸಿಸನುಪರರನ್ನು
ಸಂಶಯವನಳಿದನಿಜಸುಖಿ । ಮಹಾತ್ಮನು
ಹಿಂಸೆಗೊಡಬಡನು ಸರ್ವಜ್ಞ ॥ ೨ ॥
ಭೋಗಿಸುವವಸ್ತ್ರವನು । ಭೋಗಿಸುವವರ್ಗಿತ್ತು
ರಾಗದಿಂಸತ್ಯವೆರಸಿಪ್ಪ । ಪ್ರೀತಿಯನು
ಶ್ರೀಗುರುವೆಬಲ್ಲ ಸರ್ವಜ್ಞ ॥ ೩ ॥
ಆಣವಾದಿಯೊಳಿಹನು । ಹೂಣೆಲಿಂಗದಿಮನವ
ಕೇಣವಿಡದಿಹನುವಿರತಿ । ಯಾಗಿರುವ
ತಾಣದೊಳಗಿಹನು ಸರ್ವಜ್ಞ ॥ ೪ ॥
ಸೋಕಿದಾಸುಖಗಳನು । ಏಕದಿಂಶಿವಗೀಯೆ
ತಾಕುಯಿಲ್ಲದೆಯೆಕೈಕೊಂಡ । ಲಾಂಛನವ
ಲೋಕೇಶನೀವ ಸರ್ವಜ್ಞ ॥ ೫ ॥
ಮಲಯಜದಮಧ್ಯದೊಳು । ಸಲೆಗಂಧವಿರ್ಪಂತೆ
ಸುಲಲಿತವಾದಶರಣನ । ದೇಹದಲಿ
ನೆಲಸಿಹನು ಶಿವನು ಸರ್ವಜ್ಞ ॥ ೬ ॥
ಗಂಗೆಯಾತಡಿಲೇಸು । ಮಂಗಳನಬಲಲೇಸು
ಜಂಗಮಭಕ್ತನನಡೆಲೇಸು । ಶರಣನ
ಸಂಗವೇಲೇಸು ಸರ್ವಜ್ಞ ॥ ೭ ॥
ಕಿಚ್ಚಿನಸಂಗಾತ । ವಚ್ಚೊತ್ತಿಕರ್ಪುರವು
ಅಚ್ಚಳಿದುನಿಂದುನಿಜವಾದ । ಪದವಿಯನು
ಮೆಚ್ಚುವನುಶರಣ ಸರ್ವಜ್ಞ ॥ ೮ ॥

ಕಿಚ್ಚಿನೊಳಗಣಕೋಲ । ಬಿಚ್ಚಿಟ್ಟೊಲಿರಬೇಕು
ಅಚ್ಚಳಿಯದೇಕಪದವಾದ । ಶರಣಂಗೆ
ನಿಚ್ಚವದಕ್ಕು ಸರ್ವಜ್ಞ ॥ ೯ ॥
ಜ್ಞಾನಿಗೆಮುದವಿಲ್ಲ । ಹೀನಗುಚಿತವದಿಲ್ಲ
ಏನಿಲ್ಲದವಗೆಭಯವಿಲ್ಲ । ಐಕ್ಯಂಗೆ
ತಾನೆಂಬುದಿಲ್ಲ ಸರ್ವಜ್ಞ ॥ ೧೦ ॥
ಆಕಾಶಪಥವಿಡಿದು । ಏಕವಸ್ತುವತಿಳಿದು
ಸಾಕಾರವಾಗಿನಿಜವಾದ । ಐಕ್ಯಂಗೆ
ತಾಕೆಂಬುದಿಲ್ಲ ಸರ್ವಜ್ಞ ॥ ೧೧ ॥
ಹರಿವಹಾವನುನುಂಗಿ । ನೊರೆವಾಲಕುಡಿದಾತ
ಹರಿವಿಧಿಯನುಂಗಿದವನಕ್ಕು । ಲೋಕಕ್ಕೆ
ಅರುಹುತಾನಕ್ಕು ಸರ್ವಜ್ಞ ॥ ೧೨ ॥
ಜಾತಿಸೂತಕವಳಿದು । ಭ್ರಾಂತಿಯಾಗುಣವಳಿದು
ಆತ್ಮನಾನೆಲೆಯತಾನರಿದು । ನಿಂದಾತ
ಗೇತರಚಿಂತೆ? ಸರ್ವಜ್ಞ ॥ ೧೩ ॥
ಯವ್ವನದಹಿಂಡುಗಳ । ನೈವರಟ್ಟುಳಿಗಳಾ
ಐವರನುವಶಕೆತಂದಾತ । ಲೋಕಕ್ಕೆ
ದೈವತಾನಕ್ಕು ಸರ್ವಜ್ಞ ॥ ೧೪ ॥

## ೭. ಜ್ಞಾನಪದ್ಧತಿ.

ಆಗಿಲ್ಲಹೋಗಿಲ್ಲ । ಮೇಗಿಲ್ಲಕೆಳಗಿಲ್ಲ
ತಾಗಿಲ್ಲತಪ್ಪುತಡೆಯಿಲ್ಲ । ಲಿಂಗಕ್ಕೆ
ದೇಗುಲವೆಇಲ್ಲ ಸರ್ವಜ್ಞ ॥ ೧ ॥
ಆತ್ಮಜ್ಯೋತಿಯಬೆಳಗ । ಪ್ರೀತಿಯಿಂದರಿದೊಡೆ
ಸೂತಕವುಇಲ್ಲಭಯವಿಲ್ಲ । ಪಂಚಮಹ
ಪಾತಕವುಇಲ್ಲ ಸರ್ವಜ್ಞ ॥ ೨ ॥

ಜ್ಞಾನವುಳ್ಳವನೋಡಲು । ಭಾನುವಿನತೆರನಕ್ಕು
ಜ್ಞಾನವಿಲ್ಲದರಬರಿಯೊಡಲು । ಹಾಳೂರ
ಶ್ವಾನದಂತಕ್ಕು ಸರ್ವಜ್ಞ ॥ ೩ ॥
ಒಳಗಣಜ್ಯೋತಿಯಾ । ಬೆಳಕುಬಲ್ಲಾತಂಗೆ
ಅಳಿವುಳಿವುಕಷ್ಟಕಳವಿಲ್ಲ । ಯೆಂದಿಗೂ
ಅಳಿವಿಲ್ಲವೈಯ ಸರ್ವಜ್ಞ ॥ ೪ ॥
ಅರಿದೆನೆಂಬುವಗೊಂದು । ಕುರುಹುಂಟುಬೊಮ್ಮಕ್ಕೆ
ಅರಿದೆನೆಂದೆಂಬಅರುಹು । ತಾನರಿದೊಡೆ
ಕುರುಹಿನಬೊಮ್ಮಸರ್ವಜ್ಞ ॥ ೫ ॥
ತತ್ವಮಸಿಯೆಂಬುದರ । ಅರ್ಥವನುತಿಳಿಯದೆ
ತುತ್ತುಸವಿಯುವುದನುಣಕಲಿತ । ಯೋಗಿಗಿ
ನ್ನೆತ್ತಣತತ್ವ? ಸರ್ವಜ್ಞ ॥ ೬ ॥
ಅರಿವನರಿದೊಡೆಜೀವ । ನೆರೆಸದಾಶಿವನಕ್ಕು
ಅರುಹಿನಾಕುರುಹಮರೆದೊಡೆ । ಹರಿಬ್ರಹ್ಮ
ರಿರವಿನಂತಕ್ಕು ಸರ್ವಜ್ಞ ॥ ೭ ॥
ಕಾಯವಿಂದ್ರಿಯದಡಿಯ । ಜೀಯವಾಯದರಿಂದ
ಕಾಯವೇಬ್ರಹ್ಮಸೃಷ್ಟಿ । ಯೆಂಬುವನಾಯ
ಬಾಯಿನೋಡೆಂದ ಸರ್ವಜ್ಞ ॥ ೮ ॥
ತನ್ನತಾನರಿತವನ । ಮುನ್ನಹೊದ್ದಳುಮಾಯೆ
ಉನ್ನತವಾದಗಜವೇರಿ । ಬಪ್ಪಾತ
ಕುನ್ನಿಗಂಜುವನೆ? ಸರ್ವಜ್ಞ ॥ ೯ ॥
ಒಂದೊಂದುಹನಿಬಿದ್ದು । ನಿಂದುಹೆಮ್ಮಡುವಕ್ಕು
ಸಂದಜ್ಞಾನಿಗಳವೊಡನಾಡೆ । ಪರಬ್ರಹ್ಮ
ಮುಂದೆಬಂದಕ್ಕುಸರ್ವಜ್ಞ ॥ ೧೦ ॥
ಇಲ್ಲದಾಮಾಯೆಯನು । ಯಿಲ್ಲೆನ್ನಲರಿಯದೆ
ಬಲ್ಲಿದಮಾಯೆಯೆನಬೇಡ । ತಿಳಿಯಲ್ಕೆ
ಎಲ್ಲಿಯಮಾಯೆ? ಸರ್ವಜ್ಞ ॥ ೧೧ ॥

ಅದ್ವೈತತಾನಾಗಿ। ಯುದ್ಧವಿನ್ನಾರೊಡನೆ
ಬುದ್ಧಿಯಿಂ ತನ್ನತಾನರಿದವಗೆ। ಲೋಕದ
ಗುದ್ದಾಟವೇಕೆ? ಸರ್ವಜ್ಞ ॥ ೧೨ ॥
ಬೊಮ್ಮವನು ತಿಳಿದೊಡೆ। ಸುಮ್ಮನೇ ಇರಬೇಕು
ಬೊಮ್ಮವನರಿದುಪ್ಪುಸುರಿದರೆ। ಕಳಹೋಗಿ
ಕೆಮ್ಮಿದಂತಕ್ಕು ಸರ್ವಜ್ಞ ॥ ೧೩ ॥
ಅಂತಿರ್ದಯಿಂತಿರ್ದ। ಎಂತಿರ್ದನೆನಬೇಡ
ಕಂತೆಯನುಹೊದ್ದು ತಿರಿದುಂಬ। ಯೋಗಿತಾ
ನೆಂತಿರ್ದೊಡೇನು? ಸರ್ವಜ್ಞ ॥ ೧೪ ॥
ಬಲ್ಲೆನೆಂಬನಮಾತು। ಎಲ್ಲವೂಹುಸಿನೋಡು
ಬಲ್ಲೊಡಂಬಲ್ಲೆ ನೆನಬೇಡ। ಸುಮ್ಮನಿರ
ಬಲ್ಲಾತಬಲ್ಲ ಸರ್ವಜ್ಞ ॥ ೧೫ ॥
ಸತ್ತುಹುಟ್ಟುವರೆಂಬ। ಮಿಥ್ಯದಾನುಡಿಯೇಕೆ?
ಬಿತ್ತಿದಬೀಜಬೆಳೆವಂತೆ। ವೃಕ್ಷತಾ
ಸತ್ತುಹುಟ್ಟುವುದೆ? ಸರ್ವಜ್ಞ ॥ ೧೬ ॥
ಬೇಡನಿಕ್ಕಿದರುಂಬ। ಕೂಡನಾ ಜಾತಿಯನು
ರೂಢಿಗೀಶ್ವರನಬೆರೆದಾತ। ಸಂಸಾರ
ಕೂಡಿಹೊಂದುವನೆ? ಸರ್ವಜ್ಞ ॥ ೧೭ ॥
ಮುತ್ತುನೀರೊಳು ಹುಟ್ಟಿ। ಮತ್ತೆನೀರಪ್ಪುದೆ ?
ತತ್ವವನರಿದ ಶಿವಯೋಗಿ। ಸಂಸಾರ
ದತ್ತಲೊಂದುವನೆ? ಸರ್ವಜ್ಞ ॥ ೧೮ ॥
ತಿಳಿಯಕಾಸಿದ ತುಪ್ಪ। ಮರಳಿಹಾಲಪ್ಪುದೇ?
ಕಳೆಬೆಳಗನರಿತಶಿವಯೋಗಿ। ಸಂಸಾರ
ದೊಳಗೆ ಸಿಲ್ಕುವನೆ? ಸರ್ವಜ್ಞ ॥ ೧೯ ॥
ಓಡುಮಣ್ಣಲಿಹುಟ್ಟಿ। ಕೂಡುವುದೆ? ಜಾತಿಯನು
ರೂಢಿಗೀಶ್ವರನಬೆರೆದಾತ। ಸಂಸಾರ
ಕೂಡಹೊಂದುವನೆ? ಸರ್ವಜ್ಞ ॥ ೨೦ ॥

ಆನೆಮುಕುರದೊಳಡಗೆ । ಭಾನುವೊಳುಶಶಿಯಡಗ
ಲೇನುವೂಣೆಯುವು ಜಗದೊಳಗೆ? ಶಿವಯೋಗಿ
ಮೌನದಿಂದಿರುವ ಸರ್ವಜ್ಞ ॥ ೨೧ ॥
ಆನೆಕನ್ನಡಿಯಲ್ಲಿ । ತಾನಡಗಿಯಿರ್ಪಂತೆ
ಜ್ಞಾನವುಳ್ಳವರಹೃದಯದೊಳು । ಪರಶಿವನು
ತಾನಡಗಿ ಯಿರ್ಪಸರ್ವಜ್ಞ ॥ ೨೨ ॥
ಆನೆನೀರಾಟದೊಳು । ಮೀನಕಂಡಂಜುವುದೆ?
ಹೀನಮನದವರಬಿರುನುಡಿಗೆ । ತತ್ವದ
ಜ್ಞಾನಿಯಂಜುವನೆ? ಸರ್ವಜ್ಞ ॥ ೨೩ ॥
ಆನೆಬರೆಬೀದಿಯೊಳು । ಶ್ವಾನತಾಂಬಗುಳುವುದು
ಶ್ವಾನದಂತಾನೆಬಗುಳಿದರೆ । ಆನೆಯ
ಮಾನಕೇಹಾನಿ ಸರ್ವಜ್ಞ ॥ ೨೪ ॥
ಸತ್ತಹಾಗಿರುಯೆಂದೊ। ಡೆತ್ತಣದುಭಯವಯ್ಯ
ಕತ್ತೆಮಾನವರುತಿಳಿಯರು । ಇದುಮಹಾ
ತತ್ವದನುಡಿಯು ಸರ್ವಜ್ಞ ॥ ೨೫ ॥
ಎಲ್ಲಶಿವಶಿವಯೆಂದ । ರೆಲ್ಲಿಯುಭಯವಯ್ಯ
ಎಲ್ಲರೂಶಿವನನೆನೆದರೆ । ಕೈಲಾಸ
ವಿಲ್ಲಿಯೇ ಇಹುದು ಸರ್ವಜ್ಞ ॥ ೨೬ ॥
ಬಲ್ಲೆನೆಂದೆಂಬುವನು । ಎಲ್ಲರಿಂ ಹಿರಿಯನೇ?
ಸೊಲ್ಲಿನಭೆದವರಿದೊಡೇ । ಕಿರಿಯತಾ
ನೆಲ್ಲರಿಂ ಹಿರಿಯ ಸರ್ವಜ್ಞ ॥ ೨೭ ॥
ನೆತ್ತವನುಹಾಕಿದರೆ । ಯೆತ್ತಬಿದ್ದರುದಾಯ
ತತ್ವವನು ತಿಳಿದಶಿವಯೋಗಿ । ತಾನಿನ್ನು
ಯೆತ್ತಲಾಡಿದರೇನು? ಸರ್ವಜ್ಞ ॥ ೨೮ ॥
ಆನೆಮೇಲಿದ್ದವರು। ಶ್ವಾನಕಂಡಂಜುವರೆ?
ಜ್ಞಾನಹೃದಯದಲಿನೆಲಸಿರ್ಪ । ಯೋಗಿತಾ
ಹೀನಗಂಜುವನೆ? ಸರ್ವಜ್ಞ ॥ ೨೯ ॥

ಜ್ಞಾನಿಗಜ್ಞಾನಿಗೂ । ತಾನೊಂದುಕುರುಹುಂಟು
ಏನೇನನವನುನುಡಿದರೂ । ಜ್ಞಾನಿತಾ
ಮೌನದಿಂದಿರುವಸರ್ವಜ್ಞ ॥ ೩೦
ಜಾತಿಜಾತಿಗೆವೈರ । ನೀತಿಮೂರ್ಖಗೆವೈರ
ಪಾತಕವುವೈರಸುಜನರ್ಗೆ । ಅರಿದವನಿ
ಗೇತರವೈರ? ಸರ್ವಜ್ಞ ॥ ೩೧
ತನ್ನತಾನರಿದಾತ । ತನ್ನಜ್ಞಾನದೊಳಡಗಿ
ತನ್ನಬಂಧುಗಳಸಲೆಬಿಟ್ಟು । ಪರಬ್ರಹ್ಮ
ದುನ್ನತಿಯೊಳಿರ್ಪಸರ್ವಜ್ಞ ॥ ೩೨
ಆದಿಗೇಬೆಲೆಯಿಲ್ಲ । ಭೇದಕ್ಕೆಹೊಲಬಿಲ್ಲ ।
ಸಾಧಕಗೆಆವಭಯವಿಲ್ಲ । ಜ್ಞಾನಿಗೆ
ವಾದಗಳೆಯಿಲ್ಲಸರ್ವಜ್ಞ ॥ ೩೩
ತನ್ನತಾನರಿತರೇ । ಭಿನ್ನಭೇದಗಳಿಲ್ಲ
ತನ್ನವರಿಲ್ಲಪರರಿಲ್ಲ । ತ್ರೈಭುವನ
ತನ್ನೊಳಗಿಹುದುಸರ್ವಜ್ಞ ॥ ೩೪
ತನ್ನತಾನರಿಯುವುದು । ತನ್ನಬಿಟ್ಟಿರುವುದು
ತನ್ನೊಲ್ಲದವರತೊರೆಯುವುದು । ಜ್ಞಾನಿಗೆ
ಬಿನ್ನಣವಲ್ಲಸರ್ವಜ್ಞ ॥ ೩೫
ಆತ್ಮಗಂಗೆಯುಮಿಂದು । ಜ್ಯೋತಿಯನುತಿಳಿಯಲ್ಕೆ
ಪಾತಕದಕೋಟಿಪರಿಯುವುದು । ಶುದ್ಧಪರ
ಮಾತ್ಮನೇಆತಸರ್ವಜ್ಞ ॥ ೩೬
ತತ್ವವೆಂಬುದುತನ್ನ । ಹಿತ್ತಲಿನಗಿಡನೋಡು
ಮತ್ತೊಬ್ಬಮುರಿದುಕೊಳಲರಿಯ । ಜ್ಞಾನದ
ಬಿತ್ತುವದಬಿತ್ತುಸರ್ವಜ್ಞ ॥ ೩೭
ದೊರಕಿದುದನುಂಡುಂಡು । ದೊರಕಿದುದನುಟ್ಟುಟ್ಟು ।
ದೊರಕಿದಲಿಶಯನಗೈವಾತ । ಲೋಕಕ್ಕೆ
ನಿರಕಾರನಕ್ಕುಸರ್ವಜ್ಞ ॥ ೩೮

ಒಲ್ಲೆನೆಂಬುವವಮಾತು । ಬಲ್ಲಿತಾಗಿಯೆಇರಲು
ತಲ್ಲಣವದಿಲ್ಲಶಿವನೀವ । ಪದವಿಯಿ
ದ್ದಲ್ಲಿಗೇಬಹುದುಸರ್ವಜ್ಞ ॥ ೩೯ ॥
ಮುಂದೆಬಂದೀತೆಂದು । ಸಂದೇಹಗೊಳಬೇಡ
ಬಂದದ್ದನುಂಡುಸುಖಿಯಾಗು । ರೋಗಬಂ
ದಂದಿಗೇನರಳುಸರ್ವಜ್ಞ ॥ ೪೦ ॥
ಒಂದುಮನಜಿತವಕ್ಕು । ಒಂದುಮನಜಡವಕ್ಕು
ಒಂದುಮನಮೋಕ್ಷಪದವಕ್ಕು । ಮಾನವಗೆ
ದ್ವಂದ್ವಮನಕೇಡುಸರ್ವಜ್ಞ ॥ ೪೧ ॥
ಪಂಚವಿಷಯದತತ್ವ । ಚಂಚಲವನರಿಯದೇ
ಹಂಚನೇಹಿಡಿದುತಿರಿದುಂಬ । ಯೋಗಿತಾ
ಪಂಚಮುಖನಹನುಸರ್ವಜ್ಞ ॥ ೪೨ ॥
ಅದ್ವೈತವನುಹಾಡಿ । ಯಿದ್ದುದನುಹೋಗಾಡಿ
ಹೊದ್ದಹೆಮ್ಮರನತುದಿಗೇರಿ । ಅಣಿತಪ್ಪಿ
ಬಿದ್ದುಸತ್ತಂತೆಸರ್ವಜ್ಞ ॥ ೪೩ ॥
ಅಡವಿಯಲಿಗುಹೆಯಲ್ಲಿ । ದೃಢತನದೊಳಿದ್ದೊಡಂ
ಮಡಿವಲ್ಲಿಶಿವನಮರೆದರೆ । ಭವಬೆನ್ನ
ಬಿಡದೆತಾಬಹುದುಸರ್ವಜ್ಞ ॥ ೪೪ ॥
ಆವಾವಜೀವವನು । ಹೇವವಿಲ್ಲದೆಕೊಂದು
ಸಾವಾಗಶಿವನನೆನೆದರೆ । ಅವಬಂದು
ಕಾವನೇ?ನೋಡುಸರ್ವಜ್ಞ ॥ ೪೫ ॥
ಕಾಣಿಸುವಆತ್ಮನನು । ಕಾಣದೇಜರೆಯುವಿರಿ
ಕಾಣಲುಬಿಡಲುಕರ್ಮಗಳ । ತನ್ನ
ಆಣೆಯಿಟ್ಟಂತೆಸರ್ವಜ್ಞ ॥ ೪೬ ॥
ಧ್ಯಾನಹೊಸಬತ್ತಿಯನು । ಮೌನತಿಳಿದೊಪ್ಪಿಸು
ಹೀನಭಾವಗಳನರಿದು । ಬೆಳಗುನೀ
ಜ್ಞಾನದಪ್ರಭೆಯಸರ್ವಜ್ಞ ॥ ೪೭ ॥

ಅರಿವೆಂಬುದಾತ್ಮಂಗೆ । ನೆರೆನಿಜದಮನೆಯೆನಲು
ಅರಿತರಿತುಅರುಹುಮರೆದಡೆ । ನಯನವ
ನಿರಿದುಕೊಂಡಂತೆಸರ್ವಜ್ಞ ॥ ೪೮
ಹೇಲುವೈಹತ್ತಿದಾ । ಬಾಲನಂತಿರಬೇಕು
ಜಾಲದಭ್ರಮೆಯನೊಡಗೂಡ । ದಿದ್ದವನು
ಶೂಲಿಯಂತಕ್ಕುಸರ್ವಜ್ಞ ॥ ೪೯
ಸಂಗವನುತೊರೆದವಗೆ । ಅಂಗನೆಯರೂಬೇಡ
ಭಂಗಾರಧಾನ್ಯಗಳುಬೇಡ । ಲೋಕದ
ಸಂಗವೇಬೇಡಸರ್ವಜ್ಞ ॥ ೫೦
ಕುಂಡಲಿಯುಸವಿದವಗೆ । ಹೆಂಡಿರಗೊಡವೆಯೇಕೆ?
ಖಂಡಸಕ್ಕರೆಯಮೆಲುವಂಗೆ । ಗಾಣದ
ಹಿಂಡಿಮತ್ತೇಕೆ? ಸರ್ವಜ್ಞ ॥ ೫೧
ಕಂಬಳಿಯಹೊದ್ದುತ । ನ್ನಿಂಬಿನೊಳಗಿರಬೇಕು
ಹಂಬಲನುಕೊಂಡುಯೆರಡಾಗೆ । ನರಕದ
ಕುಂಭಿಯಂತಕ್ಕುಸರ್ವಜ್ಞ ॥ ೫೨
ಮಾತಿನಾಬೊಮ್ಮವದು । ತೂತಾದನುಡಿಕೆಯು
ಪಾತಕದನೆರವಿಯಿವುಮೂರು । ಲೋಕದೊಳ
ಗೇತಕ್ಕುಬೇಡಸರ್ವಜ್ಞ ॥ ೫೩
ಸನ್ಯಾಸತನಗೆಂಬ । ಅನ್ಯಾಯನುಡಿಯುತ್ತ
ಉನ್ನತದದೇಹದಿರವರಿಯ । ತನ್ನೊಡಲ
ನನ್ನಿಯದಿಹೊರೆವಸರ್ವಜ್ಞ ॥ ೫೪
ಅಟ್ಟಅಡಿಗೆಯರುಚಿಯ । ಹಿಟ್ಟುತಾಬಲ್ಲುದೆ?
ಶ್ರೇಷ್ಠರೆಂತೆಂದುಯೆನಬೇಡ । ಅರುಹಿನ
ದೃಷ್ಟಿಬೇಕೆಂದಸರ್ವಜ್ಞ ॥ ೫೫.
ಹೇಳಲೂಕೇಳಲೂ । ಭಾಳಲೋಚನಗಳವೆ?
ತಾಳದಂಡಿಗೆಯುಹೊರಗಾದ । ಕೇಳುವೆಯ
ಕೇಳುವನುಹೆಡ್ಡಸರ್ವಜ್ಞ ॥ ೫೬.

ತತ್ವಹುಸಿಯಾದೊಡೆ । ಮುತ್ತೊಡೆಯೆಬೆಸೆವುದೆ?
ಉತ್ತಮರು ಹುಸಿಯಕಲಿತರೆ । ಲೋಕತಾ
ನೆತ್ತಸೇರುವುದು ? ಸರ್ವಜ್ಞ ॥ ೫೭ ॥

ಚಂದನವಕರಗಿಸಲು । ಬೆಂದುಪರಿಮಳವಕ್ಕು
ಸಂದರಿವನರಿದ ಸಜ್ಜನರು । ತಾವು
ನೊಂದುಸೈರಿಪುದು ಸರ್ವಜ್ಞ ॥ ೫೮ ॥

ಸಾವಿಂಗೆಸಮತೆಗಂ । ಯಾವುದಂತರವೈಯ ?
ಸಾವುತಾಸಮತೆಯೊಳಗಿಲ್ಲ । ಕೋಪವ
ಕಾವುದೇಸಮತೆಸರ್ವಜ್ಞ ॥ ೫೯ ॥

ಕೋಪವೆಂಬುದುಕೇಳು । ಪಾಪದಾನೆಲೆಕಟ್ಟು
ಕೂಪದೊಳುನೇಣುಹರಿದಂತೆ । ನರಕಕ್ಕೆ
ಕೋಪಿತಾನಿಳಿವ ಸರ್ವಜ್ಞ ॥ ೬೦ ॥

ಕೋಪವೆಂಬುದು ತಾನು । ಪಾಪದಾನೆಲೆಕಟ್ಟು
ಆಪತ್ತುಸುಖವು ಸಮವೆಂದು । ಪೋಪರಿಗೆ
ಪಾಪನೆಲ್ಲಿಯದು? ಸರ್ವಜ್ಞ ॥ ೬೧ ॥

ಕೋಟಿಯು ಕೊಟ್ಟರೆ । ಕೂಟ ಕರ್ಮಿಯುಹೊಲ್ಲ
ನೋಟದ ನಿಜವನರಿದಾ । ಯೋಗಿಯ
ಕೂಟವೇ ಲೇಸು ಸರ್ವಜ್ಞ ॥ ೬೨ ॥

ಬಂಧನವಮಾಡಿದರೆ । ಸಂದಜ್ಞಾನಿಯೆಲೇಸು
ಹೊಂದಿಸಾಸಿರವಕೊಡುತಿರಲು । ಗರ್ವಿಯ
ಸಂಧಾನಬೇಡ ಸರ್ವಜ್ಞ ॥ ೬೩ ॥

ರಾತ್ರಿಯೊಳು ಶಿವರಾತ್ರಿ । ಜಾತ್ರೆಯೊಳು ಶ್ರೀಶೈಲ
ಕ್ಷೇತ್ರದೊಳು ಚೆಲ್ವಶ್ರೀ ಕಾಶಿ । ಶಿವತತ್ವ
ಸ್ತೋತ್ರದೊಳಧಿಕ ಸರ್ವಜ್ಞ ॥ ೬೪ ॥

ಒಡಲು ತಾನಳಿವಲ್ಲಿ । ಮುಡದಿಯುರಗಡಣದಲಿ
ಎಡರುನಿಂದೆಗಳುಬರುವಲ್ಲಿ । ಸಮತೆಯನು
ಬಿಡದಿಹನೆ ಯೋಗಿಸರ್ವಜ್ಞ ॥ ೬೫ ॥

ಹೇಳಬಲ್ಲೊಡೆ ಬೋಳು । ಕೇಳಬಲ್ಲಡೆ ಬೋಳು ।
ಹೇಳಿಕೇಳುವುದನರಿಯದೊಡೆ । ಆ ಬೋಳು
ಕಾಳುಬೋಳೆಂದ ಸರ್ವಜ್ಞ ॥ ೬೬

ಹೇಳಿವರೆ ಕೇಳುವನ । ಕೀಳಿಲಿರುವುದುಲೇಸು
ಹೇಳಿದರೆ ಕೇಳದಿರಲು । ಮನೆಯುಪ್ಪರಿಗೆ
ಮೇಲಿರಲೊಲ್ಲ ಸರ್ವಜ್ಞ ॥ ೬೭

ತಿರಿದೊಡನೆ ಕೂಳಕ್ಕು । ತೆರೆದೊಡನೆ ಬೋಳಕ್ಕು
ಕರೆದೊಡೆ ದೊಡ್ಡ ಹೆಸರಕ್ಕು । ಬಾರದೊಡೆ
ಸಿರಿ ಗೋಳೆಅಕ್ಕು ಸರ್ವಜ್ಞ ॥ ೬೮

ಆಜ್ಞೆಗೈಯಲುಬೇಡ । ಯೋಗಿನಿಂದಿಸಬೇಡ
ನಾಗಭೂಷಣನು ಅರಿದಾ । ದಕ್ಷನಶಿರವ
ಹೋಗಿತಿಳಿಯದನು ಸರ್ವಜ್ಞ ॥ ೬೯

ಸತ್ಯವಂತರಚಿತ್ತ । ಉತ್ತಮವುಎನಬೇಕು
ಮತ್ತೆಶಿವಧ್ಯಾನಮಾಡಿದರೆ । ಶಿವನಿಗಿಂ
ದತ್ತಣವರಕ್ಕು ಸರ್ವಜ್ಞ ॥ ೭೦

ದೇವನವನೀದೇವ । ಮೂದೇವರೆನಬೇಡ
ದೇವದೇವರದೇವಜಗದೇವ । ಪ್ರಾಣಿಗಳ
ಕಾವವನೆದೇವ ಸರ್ವಜ್ಞ ॥ ೭೧

ತೆಂಗಿಗೂ ಹಿರಿಯರಿಗು । ಹಂಗುಮಾಡಲುಬೇಕು
ತೆಂಗಿಗೆಬುಡದೆ ನೀರೆರೆಯೆ । ತಲೆಯಲ್ಲಿ
ಹಂಗತೀರ್ಚುವುದು ಸರ್ವಜ್ಞ ॥ ೭೨

ಪರ್ವತಕೆತಾಹೋದ । ಗರ್ವತನವೇನೈಯ?
ಒರ್ವಶಿವತನ್ನೊಳಿರಲು । ತಾಹೋದ
ನಿರ್ವ್ಯಾಜವೇನು? ಸರ್ವಜ್ಞ ॥ ೭೩

ಕಪ್ಪೆಮೀನುಗಳಿಲ್ಲ । ವಿಪ್ಪುದದು ತೀರ್ಥವೇ?
ತುಪ್ಪೋಗರಿಕ್ಕಿಸಲಹುವ । ಸತ್ಪುರುಷ
ರಿಪ್ಪುದೇತೀರ್ಥ ಸರ್ವಜ್ಞ ॥ ೭೪

ಸತ್ಯರಾನುಡಿತೀರ್ಥ । ನಿತ್ಯರಾನಡೆತೀರ್ಥ
ಉತ್ತಮರಸಂಗವದುತೀರ್ಥ । ಹರಿವನೀ
ರೆತ್ತಣತೀರ್ಥ? ಸರ್ವಜ್ಞ ॥ ೭೫ ॥
ಕಣ್ಣುಮಾಡುವಕೃತ್ಯ । ಹಣ್ಣುದಿಹುದೊಂದಿಲ್ಲ
ತಣ್ಣಗಿಹಮನವನುರಿಸುವುದು । ಲೋಕಕ್ಕೆ
ಕಣ್ಣೆಕಾರಣವು ಸರ್ವಜ್ಞ ॥ ೭೬ ॥
ಕಣ್ಣಿಂದಪಾಪವೂ । ಕಣ್ಣಿಂದಪುಣ್ಯವು
ಕಣ್ಣಿಂದಲಾದುದಿಹಪರವು । ಲೋಕಕ್ಕೆ
ಕಣ್ಣೆಕಾರಣವು ಸರ್ವಜ್ಞ ॥ ೭೭ ॥
ವೇದಶಾಸ್ತ್ರಾಗಮುವ । ನೋದಿದರೆಫಲವೇನು?
ವಾದಿಸುವಸಮರ್ಥರಿಲ್ಲದೊಡೆ । ಆಓದು
ಬೂದಿಯಹೋಮ ಸರ್ವಜ್ಞ ॥ ೭೮ ॥
ಒಡಲಹಿಡಿದಾಡದಿರು । ನುಡಿಯಹೋಗಾಡದಿರು ।
ನಡೆಯೊಳ್ಳೆವರನುಬಿಡದಿರು । ಶಿವನಲ್ಲಿ
ಧೃಡವಂತನಾಗು ಸರ್ವಜ್ಞ ॥ ೭೯ ॥
ಎಲ್ಲಆಸೆಗಳಬಿ । ಟ್ಟಲ್ಲಿಯೇಕೈಲಾಸ
ಎಲ್ಲವನುಬಿಡದೆಭ್ರಮಿಸಿದೊಡೆ । ನರಕತಾ
ನಿಲ್ಲಿಯಿಹುದೆಂದ ಸರ್ವಜ್ಞ ॥ ೮೦ ॥
ಬಿಂದುನಾದಗಳೆಂಬ । ನಂದನದವನವುಂಟು
ಇಂದುಧರನೆಂಬ ಕೊಳನುಂಟು । ತಿಳಿನೀರ
ಮಿಂದುಂಬರಿಲ್ಲ ಸರ್ವಜ್ಞ ॥ ೮೧ ॥
ಮನದಲ್ಲಿನೆನೆದವಗೆ । ಮನೆಯೇನು? ಮಠವೇನು?
ಮನದಲ್ಲಿ ಶಿವನನೆನೆಯದವ । ಪರ್ವತದ
ಕೊನೆಯಲಿದ್ದೇನು? ಸರ್ವಜ್ಞ ॥ ೮೨ ॥
ನೆನಹುಇದ್ದರೆಸಾಕು । ಮನೆಯೇನು? ಮಠವೇನು?
ನೆನೆಯದೆಯೆ ಶಿವನಮರೆವವರು । ದೇಗುಲದ
ಕೊನೆಯಲಿದ್ದೇನು? ಸರ್ವಜ್ಞ ॥ ೮೩ ॥

ಕರದಿಕಪ್ಪರಮುಂಟು । ತಿರಿದುಣಲುನಾಡುಂಟು
ಹರನೆಂಬದೈವನಮಗುಂಟು । ನಮಗಿಂತ
ಸಿರಿವಂತರಾರು? ಸರ್ವಜ್ಞ ॥ ೮೪ ॥
ವ್ಯಾಪಾರವಳಿದಲ್ಲ । ದಾಪರವುಕಾಣಿಸದು
ಪಾಪಕರ್ಮಗಳತಾತಿಳಿದು । ನಿಂದವಗೆ
ಕೋಪವೆಲ್ಲಿಯದು? ಸರ್ವಜ್ಞ ॥ ೮೫ ॥
ವಿಷಯದಪುಡಿಗಳನು । ಬಿಸಿಮಾಡಿಕೊಳ್ಳಲು
ಪಶುಪತಿಯಕ್ಕು ಪದವಕ್ಕು ವೈಬಣ್ಣ
ಮಿಸುನಿಯಂತಕ್ಕು ಸರ್ವಜ್ಞ ॥ ೮೬ ॥
ಬಿಂದುವೂಮೂತ್ರವೂ । ಒಂದೆನಾಳದಿಬರ್ಕು
ಒಂದುಬಿಟ್ಟೊಂದುತಡೆದರೆ । ಪರಬ್ರಹ್ಮ
ಮುಂದೆಬಂದಕ್ಕು ಸರ್ವಜ್ಞ ॥ ೮೭ ॥
ಕುರಿಕಬ್ಬಿನೊಳಹೊಕ್ಕು । ಅರಿಯದೇತನಿರಸವ ।
ಹೊರಗಣಸೋಗೆಮೆಲುವಂತೆ । ತತ್ವದ
ಇರವರಿಯದವಗೆ ಸರ್ವಜ್ಞ ॥ ೮೮ ॥
ಸತ್ಯರೂ ಹುಸಿದರೆ । ವೊತ್ತಿಹರಿದರೆಶರಧಿ
ಉತ್ತಮರುತಪ್ಪಿನಡೆದರೆ । ಲೋಕನಿ
ನ್ನೆತ್ತಸೇರುವುದು ಸರ್ವಜ್ಞ ॥ ೮೯ ॥
ವಾರಣಾಸಿಗೆಹೋದ । ಕಾರಣವದೇನಯ್ಯ?
ಕಾರಣಾತ್ಮಕ ತನ್ನೊಳಿರಲು । ತಾಹೋದ
ಕಾರಣವದೇನು? ಸರ್ವಜ್ಞ ॥ ೯೦ ॥
ಸತ್ತುಹೋದರೆನಿನಗ । ದೆತ್ತಣದುಮೋಕ್ಷವೈ
ಸತ್ತುಹೋಗುವುದರಿಂಮುನ್ನ । ಮೋಕ್ಷದ
ಗೊತ್ತುತಿಳಿಯೆಂದ ಸರ್ವಜ್ಞ ॥ ೯೧ ॥
ಒಸೆದುಪಂಚಾಕ್ಷರಿಯ । ನುಸಿರಕೊನೆಯೊಳುನಿಲಿಸಿ
ಸಸಿನೆಕುಳ್ಳಿರ್ದುತಾಜಪಿಪ । ಯೋಗಿತಾ
ಕಿಸುವಾಯನಕ್ಕು ಸರ್ವಜ್ಞ ॥ ೯೨ ॥

ತನ್ನನೋಡಲಿಯೆಂದು। ಕನ್ನಡಿಯುಕರೆವುದೆ?
ತನ್ನಲ್ಲಿಜ್ಞಾನವುದಯಿಸಿದ। ಯೋಗಿತಾ
ಕನ್ನಡಿಯವೋಲು ಸರ್ವಜ್ಞ ॥ ೯೩ ॥
ಸತ್ಯವನ್ನರಿದರೆ। ಸತ್ತಹಾಗಿರಬೇಕು
ಸತ್ಯವನ್ನರಿದುವುಸುರಿದರೆ। ಸತ್ತವರಿ
ಗತ್ತಹಾಗಕ್ಕು ಸರ್ವಜ್ಞ ॥ ೯೪ ॥
ಆತುಮನಬಣ್ಣವನು। ಮಾತಿನಾರೋಹವನು
ಜಾತಿಯಾನೆಲೆಯನರಿದ। ಸಚ್ಚಿದ
ನಾತನೇಯೋಗಿ ಸರ್ವಜ್ಞ ॥ ೯೫ ॥
ಕೋಡಗವುತಾನೊಂದು। ನಾಡಿಸುವುದೇಸಹಜ
ಮೂಢಾತ್ಮರೇನನುಡಿದರೆಯು। ಜ್ಞಾನಿತಾ
ನಾಡದೇಹೋಹ ಸರ್ವಜ್ಞ ॥ ೯೬ ॥
ಎಂಜಲುಹೊಲೆಯಲ್ಲ। ಸಂಜೆಗತ್ತಲುಅಲ್ಲ
ಅಂಜಿಕೆಯಿಲ್ಲಭಯವಿಲ್ಲ। ಶಿವನಕೃಪೆ
ಸಂಜಾತನಿರಲು ಸರ್ವಜ್ಞ ॥ ೯೭ ॥
ಇಲ್ಲಿಲ್ಲವೆಂಬುವರ। ನಿಲ್ಲಿಯೇಅರಸಿದೊಡೆ
ಇಲ್ಲದಿಲ್ಲೆಂದುಅರಸುವುದು। ಜಗವೆಲ್ಲ
ಇಲ್ಲಿಗಳವಕ್ಕು ಸರ್ವಜ್ಞ ॥ ೯೮ ॥
ಮನೆಯೇನುಮಠವೇನು? ನೆನಹುಇದ್ದರೆಸಾಕು
ನೆನೆಯದೆಯೆಶಿವನಮರೆದವರು। ದೇಗುಲದ
ಕೊನೆಯಲಿರಲೇನು? ಸರ್ವಜ್ಞ ॥ ೯೯ ॥

* * * * * ॥ ೧೦೦-೧೦೨ ॥

## ೮. ಶಿವಯೋಗಿಪದ್ಧತಿ.

ಮಾಯೆಮೋಹವನೆಚ್ಚಿ। ಕಾಯವನುಕರಗಿಸುತ
ಸಾಯಾಸಗೊಳುತಲಿರಬೇಡ। ಅಡಿಗಡಿಗೆ
ಕಾಯೊ ಶಿವ ಯೆನ್ನು ಸರ್ವಜ್ಞ ॥ ೧ ॥

ಜಳ್ಳುಮನುಜರುತಾವು । ಸುಳ್ಳುಸಂಸಾರದೊಳು
ಮಳ್ಳಿಡಿದುಮಾಯೆಯೆಂಬವಳ । ಬಲೆಯಲ್ಲಿ
ಹೊರಳಾಡುತಿಹರು ಸರ್ವಜ್ಞ ॥ ೨ ॥
ಎಣ್ಣೆಬೆಣ್ಣೆಯ ಋಣವು । ಅನ್ನವಸ್ತ್ರದ ಋಣವು
ಹೊನ್ನೆಣ್ಣ ಋಣವು ತೀರಿದ । ಆಕ್ಷಣವೆ
ಮಣ್ಣುಪಾಲೆಂದ ಸರ್ವಜ್ಞ ॥ ೩ ॥
ಕ್ಷಣಮಾತ್ರವಾದರೂ । ಗುಣವುಳ್ಳವರೊಳಾಡು
ಗುಣಹೀನರಾದವರೊಳಾಡೆ । ದುಃಖದಲಿ
ಹೆಣಕೆ ಅತ್ತಂತೆ ಸರ್ವಜ್ಞ ॥ ೪ ॥
ಉರಿವ ಕೆಂಡವ ಮೆಟ್ಟಿ । ಮರುಗುವಾನರನಂತೆ
ಅರುಹಿಲ್ಲದವರವೊಡನಾಟ । ತನ್ನತಾ
ನಿರಿದುಕೊಂಡಂತೆ ಸರ್ವಜ್ಞ ॥ ೫ ॥
ಬಲ್ಲವರವೊಡನಾಟ । ಬೆಲ್ಲವನು ಮೆದ್ದಂತೆ
ಅಲ್ಲದಹುದೆಂಬ ಅಜ್ಞಾನಿ । ಯೊಡನಾಟ
ಕಲ್ಲುಹಾಯ್ದಂತೆ ಸರ್ವಜ್ಞ ॥ ೬ ॥
ಸಜ್ಜನರ ಸಂಗವದು । ಹೆಜ್ಜೇನು ಸವಿದಂತೆ
ದುರ್ಜನರ ಸಂಗಡೊಡನಾಟ । ಬಚ್ಚಲಿನ
ರೊಚ್ಚಿನಂತಿಹುದು ಸರ್ವಜ್ಞ ॥ ೭ ॥
ಬರೆಕಂಡು ಕರೆಯುತಾ । ನಿರುಕುಳ್ಳಿರೆನ್ನನು
ಸರಸ ಸಹಜದಲಿ ನಡೆಯುದೆ । ಇರುತಿಹನ
ಹಿರಿಯುತನವೇನು? ಸರ್ವಜ್ಞ ॥ ೮ ॥
ಒಳ್ಳೆಯವನೊಡನಿರಲು । ಕಳ್ಳನೊಳ್ಳಿದನಕ್ಕು
ಒಳ್ಳಿದನು ಕಳ್ಳನೊಡನಾಡೆ । ಅವಶುದ್ಧ
ಕಳ್ಳನೇ ಅಕ್ಕು ಸರ್ವಜ್ಞ ॥ ೯ ॥
ಜಾಣಜಂಗಮಲಿಂಗ । ಕೋಣೆಯಲಿ ತಾನುಂಬ
ಜಾಣನಕ್ರಮವು ತನಗೆಂಬ । ಮರುಳಂಗೆ
ಕಾಣಿಸುವನೇನು? ಸರ್ವಜ್ಞ ॥ ೧೦ ॥

ಬಲ್ಲವರು ಹಿರಿಯರು । ಯೆಲ್ಲಗರುವರುಗಳು ।
ನಲ್ಲಳು ಮುಂದೆ ಸುಳಿಯುತಿರೆ । ಲೋಕದೊಳು
ಒಲ್ಲದವರಿಲ್ಲ ಸರ್ವಜ್ಞ ॥ ೧೧ ॥
ಹೆಣ್ಣುಹೊನ್ನುಗಳನ್ನು । ಹಣ್ಣಾದ ಮರಗಳನು ।
ಕಣ್ಣಿನಿಂನೋಡಿ ಮನದಲ್ಲಿ । ಬಯಸದಿಹ
ಅಣ್ಣಗಳದಾರು? ಸರ್ವಜ್ಞ ॥ ೧೨ ॥
ವಚನದೊಳಗೆಲ್ಲರೂ । ಶುಚಿವೀರ ಧೀರರು ।
ಕುಚಹೇಮ ಶಸ್ತ್ರಸೋಂಕಿದೊಡೆ । ಲೋಕದೊಳ
ಗಚಲರಾರ್ಯೆಯು? ಸರ್ವಜ್ಞ ॥ ೧೩ ॥
ಜಡೆಯುಕಟ್ಟಲುಬಹುದು । ಉಡಿಗೆಯುನ್ನುಡಬಹುದು
ಬಿಡದೇ ವಿರಕ್ತಿಯಿರಬಹುದು । ಪರಶಿವನ
ಹಿಡಿವುದಳವಲ್ಲ ಸರ್ವಜ್ಞ ॥ ೧೪ ॥
ಮುಂಡೆಬೋಳಿಸಿಕೊಂಡು । ತುಂಡುಗಂಬಳಿ ಪೊದೆದು
ಹಿಂಡನಗಲಿರ್ಪ ಗಜದಂತೆ । ಇರುವವರ
ಕಂಡುನಂಬುವುದು ಸರ್ವಜ್ಞ ॥ ೧೫ ॥
ಬೆಣ್ಣೆಬೆಂಕಿಯ ನಡುವೆ । ತಣ್ಣಗಿರಬಲ್ಲುದೇ?
ಹೆಣ್ಣಿದ್ದಮನೆಗೆ ಯೆಡೆಯಾಡಿ । ಶಿವಯೋಗಿ
ಮಣ್ಣುಮಸಿಯಾದ ಸರ್ವಜ್ಞ ॥ ೧೬ ॥
ಒಂದುಅಡಿಗೆಯುಭಾಂಡ । ವೊಂದೊಂದು ಭೋಗವನು
ಅಂದದಿಂದುಂಡು ಹಂಚಾದ । ಪರಿಯಂತೆ
ಬಿಂದುವಿನದೇಹ ಸರ್ವಜ್ಞ ॥ ೧೭ ॥
ಭಂಡುಗಳನುಡಿಯುತಿಹ । ದಿಂಡೆಯನಹಿಡಿತಂದು
ಖಂಡಿಸಿರಿ ಅವನನೆನ್ನುತಲಿ । ಮಾಹಾತ್ಮೆ
ಕೆಂಡವಾಗುವುದು ಸರ್ವಜ್ಞ ॥ ೧೮ ॥
ಕಂಡದ್ದುನುಡಿದರೆ । ಕೆಂಡವಾಗುವರೆಲ್ಲ
ಮಂಡಲದೊಳಗೆ ಯೆನಿತು । ತಪ್ಪದರ
ಕಂಡದ್ದೆ ಯಿಲ್ಲ ಸರ್ವಜ್ಞ ॥ ೧೯ ॥

ಜಡೆಯಕಟ್ಟಿದ ಮುನ್ನ । ಒಡನೆಬಂದುದುಮಾರಿ
ಗಡಗಡಿಸಿಹೇನುಹರಿವಾಗ । ಬೋಳಯ್ಯ
ಬಿಡದೆತಾ ನಗುವ ಸರ್ವಜ್ಞ ॥ ೨೦ ॥
ಪರತತ್ವತನ್ನೊಳಗೆ । ಯೆರವಿಲ್ಲದಿರುತಿರಲು
ಪರದೇಶಿಯಾಗಿ ತಿರುಗುತ್ತ । ತಾನೆ
ಪರಮುಗುರುವೆಂಬ ಸರ್ವಜ್ಞ ॥ ೨೧ ॥
ವೈರಾಗ್ಯವೆಂದೆಂಬ । ಕ್ಷೀರಸಾಗರದೊಳಗೆ
ಆರಾರು ಯಿಹರೊ ಅವರೆಲ್ಲಾ । ಸಂಸಾರ
ಘೋರಕ್ಕೆ ಹೊರಗು ಸರ್ವಜ್ಞ ॥ ೨೨ ॥
ನಿಶ್ಚಯವಬಿಡದೊಬ್ಬ । ರಿಚ್ಚೆಗೇನುಡಿಯದಿರು
ಮೆಚ್ಚಿದೊಂದೂರೊಳಿರದಿರು । ಶಿವತನ್ನ
ಇಚ್ಚೆಯೊಳಿಹನು ಸರ್ವಜ್ಞ ॥ ೨೩ ॥
ಹುತ್ತುಹಾವಿಗೆಚಂದ । ಮುತ್ತುಕೊರಳಿಗೆಚಂದ
ನಕ್ಷತ್ರಚಂದಗಗನಕ್ಕೆ । ಯೋಗಿಗೆ
ಭಿಕ್ಷವೇಚಂದ ಸರ್ವಜ್ಞ ॥ ೨೪ ॥
ಬೇಡುವುದು ಭಿಕ್ಷವನು । ಮಾಡುವುದುತಪವನ್ನು
ನಾಡುಮಾತುಗಳಬಿಡುವುದು । ಶಿವನಿಗೆ
ಕೂಡಬಹುದೆಂದ ಸರ್ವಜ್ಞ ॥ ೨೫ ॥
ಭಿಕ್ಷವೆತ್ತಿದಅನ್ನ । ಮೋಕ್ಷಕ್ಕೆ ಸಾಧನವು
ಕುಕ್ಷಿಗೇ ನರರಕಾಡಿ । ತಂದುಂಬವನು
ಮೋಕ್ಷಕ್ಕೆದೂರ ಸರ್ವಜ್ಞ ॥ ೨೬ ॥
ತುರುಕರಿಲ್ಲದವೂರು । ನರಕಭಾಜನಮುಕ್ಕು
ತುರುಕರುಂಟಾದರುಣಲುಂಟು । ಲೋಕಕ್ಕೆ
ತುರುಕರುವೆ ದೈವ ಸರ್ವಜ್ಞ ॥ ೨೭ ॥
ಅಕ್ಕರವಕಲಿತವನು । ಠಕ್ಕುಗಳಕಲಿತಾನು
ಇಕ್ಕಾಡಿಕಲಿತು ಯಮಲೋಕ । ತಾನು
ಹೊಕ್ಕಾಡಕಲಿತ ಸರ್ವಜ್ಞ ॥ ೨೮ ॥

ಒಡೆಯನೆಂದೆನಲೇಕೆ? ತಡೆಯೆ ಬಾಗಿಲದೇಕೆ?
ನೃಡರೂಪನೆನಿಸಿಕೊಳಲೇಕೆ? ಸತ್ಯದಾ
ನಡೆಯಿಲ್ಲದವಗೆ ಸರ್ವಜ್ಞ ॥ ೨೯ ॥

ಇಲ್ಲದಾಮಾಯೆಯನು । ಯಿಲ್ಲೆನ್ನಲರಿಯದೆ
ಬಲ್ಲಿತ್ತುಮಾಯೆ ಯೆನಬೇಡ । ತಿಳಿಯಲ್ಕೆ
ಎಲ್ಲಿಹುದುಮಾಯೆ? ಸರ್ವಜ್ಞ ॥ ೩೦ ॥

ಕಲ್ಲುಪ್ಪುಕಪ್ಪುರವು ಸೊಲ್ಲೆರಡು । ಧಾತೊಂದು
ಕಳ್ಳನೊಳ್ಳಿದನು ರೂಪೊಂದು । ಶಿವಯೋಗಿ
ಕಳ್ಳನಂತಿಹನು ಸರ್ವಜ್ಞ ॥ ೩೧ ॥

ಕಣ್ಣೀರದೊಪ್ಪುವುದು । ಹೆಣ್ಣಿದ್ದಮನೆಯಲ್ಲಿ
ತಣ್ಣನೆಧ್ಯಾನವಿರುತಿರೆ । ಕಾಮವು
ಮಣ್ಣಾಗಿಪೋಕು ಸರ್ವಜ್ಞ ॥ ೩೨ ॥

ಎಲ್ಲರೂತನಗಾಗ । ಬಲ್ಲರೇ? ಅದುಯೋಗ
ಅಲ್ಲಲ್ಲಿಗಲ್ಲಿಕೃತಕ । ವಾದರೆತನ
ಗೆಲ್ಲಿಯದುಯೋಗ? ಸರ್ವಜ್ಞ ॥ ೩೩ ॥

ಚಿತ್ತವೆರಡಾಗದೇ ಉತ್ತಮರಿಗಿರಬೇಕು
ಚಿತ್ತವದನೆಯರುಸುಳಿಯಲು । ಮಹತ್ತಿನ
ಚಿತ್ತವೆತ್ತಣದು? ಸರ್ವಜ್ಞ ॥ ೩೪ ॥

ಎಲ್ಲವನುಬಲ್ಲಾತ ಬಲ್ಲವನುಬಲ್ಲಡೆ
ಬಲ್ಲೆನೆಂದನ್ನಲರಿವವನ । ಬಲುಮೆಯಲಿ
ಕಲ್ಲುಹೊತ್ತಂತೆ ಸರ್ವಜ್ಞ ॥ ೩೫ ॥

ಎಲ್ಲವನು ಬಲ್ಲಾತ । ಬಲ್ಲವನು ಬಲ್ಲೊಡೆ
ಬಲ್ಲೆನೆಂದೆನ್ನಲರಿವವನೆ । ಬಲುಮೆಯಲಿ
ಕಲ್ಲುಹೊತ್ತಂತೆ ಸರ್ವಜ್ಞ ॥ ೩೬ ॥

* * * * * ॥ ೩೭ ॥

## ೯. ಯೋಗಪದ್ಧತಿ.

ಯೋಗಿಗೆಹೊಲೆಯಿಲ್ಲ। ಸಾಗರಕೆನೆಲೆಯಿಲ್ಲ
ಯೋಗವಟ್ಟಗೆಗೆಹೊಳಪಿಲ್ಲ। ಜ್ಞಾನಿಗೆ
ರಾಗದ್ವೇಷಿಲ್ಲ ಸರ್ವಜ್ಞ ॥ ೧ ॥
ದೂಸಿಯಾಕೊಡದಂತೆ। ಸೂಸುತಿಪ್ಪುದುಯೋಗ
ದಾಸಿಪರರೊಡನೆನಗಲೇನು? ಕೊಡದಮೇ
ಲಾಸೆಯಿದ್ದಂತೆ ಸರ್ವಜ್ಞ ॥ ೨ ॥
ಓದಿಬೂದಿಯಪೂಸಿ। ತೋದಕಾವಿಯಪೊದೆದು
ಮೇದಿನಿಯಮೇಲೆವಿಷಯಕ್ಕೆ। ತಿರುಗುವಾ
ಮಾದಿಗರನೋಡು ಸರ್ವಜ್ಞ ॥ ೩ ॥
ಮನವಘನದಲಿಕಟ್ಟಿ। ನೆನಹಮನದಲಿಕಟ್ಟಿ
ಮನವವಿಷಯಕ್ಕೆ ಎಳಸದಾ। ಯೋಗಿಗೆ
ವನವಾಸವೇಕೆ? ಸರ್ವಜ್ಞ ॥ ೪ ॥
ಆಯದಲಿನಿಜದಿನಿಂ। ದಾಯವನುಅರಿಯದೆ
ಆಯಾಸಜಪವಜಪಿಸುವ। ಯೋಗಿಯ
ಬಾಯನೋಡೆಂದ ಸರ್ವಜ್ಞ ॥ ೫ ॥
ಹರಿವಹಕ್ಕಿಯನುಂಗಿ। ನೊರೆವಾಲಕುಡಿದಾತ
ಹರಿಯಜನಕ್ಕುಹರನಕ್ಕು। ಲೋಕಕ್ಕೆ
ಅರುಹುತಾನಕ್ಕು ಸರ್ವಜ್ಞ ॥ ೬ ॥
ಅಷ್ಟದಳಕಮಲವನು। ಮುಟ್ಟತಿರುಗುವಹಂಸ
ಮೆಟ್ಟುವೆದಳದಮಧ್ಯದಲಿ। ಇರುವುದನು
ಮುಟ್ಟುವನೆಯೋಗಿಸರ್ವಜ್ಞ ॥ ೭ ॥
ಕೊಟ್ಟಜಾಡನಪೊಂಕೆ। ಮುಟ್ಟುವುದುಮೂರೂರ
ಬಟ್ಟೆಗಳುನಾಲ್ಕುಪಥಮೂರು। ಅವನೂರು
ಬೆಟ್ಟದಮೇಲೆಸರ್ವಜ್ಞ ॥ ೮ ॥

ಕತ್ತಲೆಯಕಾಳಿಂಗೆ । ಉತ್ತಮದಜ್ಯೋತಿಯನು
ಎತ್ತಿಪ್ರಜ್ವಲಿಸಲಾಆಟ । ಬೆಳಗಾಗೆ
ಉತ್ತಮದಜ್ಯೋತಿಸರ್ವಜ್ಞ ॥ ೯ ॥
ರುದ್ರಾಕ್ಷಿಭಸಿತವನು । ಹೊದ್ದಿರಿಸಿದೇಹದಲಿ
ಇದ್ದಪಾಪಗಳಹುದುಗಿಸಿ । ಶಿವತಾನು
ಇದ್ದಲ್ಲಿ ಇಹನು ಸರ್ವಜ್ಞ ॥ ೧೦ ॥
ಒಂದುಕಂಬದೊಳೈದು । ಗಂಧಹಂಸನಕಟ್ಟಿ
ಒಂದಾಗಿ ಮನವಬಲಿದರೆ । ಪರಬ್ರಹ್ಮ
ಮುಂದೆಬಂದಕ್ಕು ಸರ್ವಜ್ಞ ॥ ೧೧ ॥
ಹಸಿವಕೊಂದಾತನೇ । ದೆಸೆಗೆ ಕೀರ್ತಿತನಕ್ಕು
ಪಶುಪತಿಯಕ್ಕು ಪದವಕ್ಕು । ಕೈಲಾಸ
ವಶವರ್ತಿಯಕ್ಕು ಸರ್ವಜ್ಞ ॥ ೧೨ ॥
ಬಿಂದುನಾದವನುಂಗಿ । ಇಂದುರವಿಯನುನುಂಗಿ
ಸಂದಿರ್ದಮನವನಿಜನುಂಗಿ । ದಾಯೋಗಿ
ಇಂದುಧರನಕ್ಕುಸರ್ವಜ್ಞ ॥ ೧೪ ॥
ವೇದವೇ ಮೊಲೆನಾಲ್ಕು । ನಾದವೇ ನೊರೆವಾಲು
ಆದರಿಸಿ ಪಶುವಕರೆದುಂಬ । ಯೋಗಿಯ
ಪಾದಕ್ಕೆ ಶರಣು ಸರ್ವಜ್ಞ ॥ ೧೫ ॥
ಬ್ರಹ್ಮನಾಳದಕಿಚ್ಚು । ಒಮ್ಮೆಯೇ ನಂದದು
ಹಮ್ಮಿನ ಹೊಲೆಯಕಳಕೊಂಡ । ಯೋಗಿತಾ
ಬ್ರಹ್ಮವೇ ಅಕ್ಕು ಸರ್ವಜ್ಞ ॥ ೧೬ ॥
ಮೂರುಖಂಡುಗ ಹೊಟ್ಟು । ತೂರಿದರೆ ಫಲವೇನು ?
ಹೇರಿಮಾರುವ ಭತ್ತವನು । ಪರಬ್ರಹ್ಮ
ಮಾರಿತ್ತು ನೋಡು ಸರ್ವಜ್ಞ ॥ ೧೭ ॥
ಕುಂಡಲಿಯ ಸವಿದಾತ । ಹೆಂಡತಿಯ ನೊಲಿವನೆ?
ಖಂಡಿತವಮಾರ್ದ ಶಿವಯೋಗಿ । ಮಾಂಸದಾ
ಪಿಂಡಕೊಲಿಯುವನೆ? ಸರ್ವಜ್ಞ ॥ ೧೮ ॥

ಇಂದ್ರಿಯ ಯಮಾದಿಗಳ । ಸಂಧಿಸಿ ಕೊಂದೊಡೆ
ಚಂದ್ರಧರನಹುದು ಹರನಹುದು । ಲೋಕಕ್ಕೆ
ಕಂದರ್ಪನಹುದು ಸರ್ವಜ್ಞ ॥ ೧೯ ॥
ಖೇಚರದಮುದ್ರೆಯನು । ಆಚರಿಸಬಲ್ಲೊಡೆ
ಲೋಚನವುಮೂರುತನಗಕ್ಕು । ಭೂಚರರು
ಖೇಚರರೆ ಅಕ್ಕುಸರ್ವಜ್ಞ ॥ ೨೦ ॥
ಅರುಹುಸತ್ತೊಡೆಜೀವ । ನೆರೆಸದಾಶಿವನಕ್ಕು
ಅರುಹಿನಾಕಡೆಯಲಿಹಬ್ರಹ್ಮ । ಇಂದ್ರಾದ್ಯ
ರರಿಯರೇಕೈಯು? ಸರ್ವಜ್ಞ ॥ ೨೧ ॥
ಒಂದರಾಮೊದಲೊಳಗೆ । ಬಂದಿಹುದು ಜಗವೆಲ್ಲ
ಒಂದರಾಮೊದಲನರಿದೊಡೆ । ಜಗತನ್ನ
ಮುಂದೆಬಂದಕ್ಕು ಸರ್ವಜ್ಞ ॥ ೨೨ ॥
ಉತ್ತುಂಗ ಮಾಣಿಕವ । ಬಿತ್ತಿ ಮಂಟಪದೊಳಗೆ
ನಿತ್ಯನಿರ್ಮಲದ ನಿಜಕಂಡ ! ಯೋಗಿಗಿಂ
ನೆತ್ತಣದು? ಸಾವು ಸರ್ವಜ್ಞ ॥ ೨೩ ॥
ಹಂಸನಾದಳದವರ । ವಂಶವನು ತಿಳಿಯದೆ
ಹಂಸತಾನೆಂದು ತಿರುಗುವ । ಯೋಗಿಯ
ವಂಶವೇ ಮರುಳು ಸರ್ವಜ್ಞ ॥ ೨೪ ॥
ಹಾಲುಂಬ ಹಂಸನ । ಹೊಲಬನರಿಯದ ಯೋಗಿ
ಮೇಲಣ ಪದವನರಿಯದೆಯೆ । ಗಿಳಿಯೋದಿ
ಹೇಲುತಿಂದಂತೆ ಸರ್ವಜ್ಞ ॥ ೨೫ ॥
ಇಪ್ಪತ್ತರೈದನೆಯ । ತತ್ವವನು ಗುಣಿಸಿದರೆ
ಬಪ್ಪಕರ್ಮಗಳು ಕುಲಕೋಟಿ । ಸ್ವರ್ಗದೊಳ
ಗಿರ್ಪನೇ ಯೋಗಿ ಸರ್ವಜ್ಞ ॥ ೨೬ ॥
ಚಿನ್ನಕಳೆಯೊಳಗಿರಲು । ಮನ್ನಣೆಯು ಹಿರಿದಕ್ಕು
ಉನ್ನತದ ಪುಷ್ಪಗಿರಿಯಕ್ಕು । ಶಂಕರನ
ಸನ್ನಿಧಿಯುಮಕ್ಕುಸರ್ವಜ್ಞ ॥ ೨೭ ॥

ತೋರುವಾಕುಲಗಿರಿಯು । ಮೇಲೆತಪದೊಳಗಿರ್ದು
ಬೇರೊಂದುಮನದೊಳೆಣಿಸಲು । ಬೆಳೆದಹೊಲ
ಸೂರೆಹೋದಂತೆಸರ್ವಜ್ಞ ॥ ೨೨ ॥
ಯತಿಗೇಕೆಕೋಪ? ದು । ರ್ಮತಿಗೇಕೆ? ಪರತತ್ವ
ಪತಿವ್ರತೆಗೇಕೆಪರನೋಟ? ಯೋಗಿಗೆ
ಸ್ತುತಿನಿಂದೆಯೇಕೆ? ಸರ್ವಜ್ಞ ॥ ೨೯ ॥
ದಂಡಕೋಲಿನತುದಿಗೆ । ಹಿಂಡಿಕೈಪವಕಟ್ಟಿ
ಮುಂಡೆಯರಕಂಡುಭ್ರಮಿಸುವ । ಯೋಗಿಗೆ
ಮುಂಡೆಬೋಳೇಕೆ ? ಸರ್ವಜ್ಞ ॥ ೩೦ ॥
ಆಲದಾಬಿಳಲಂತೆ । ಜೋಲುಜಡೆಗಳಬಿಟ್ಟು
ನಾಲಿಗೆಯುಕೌಪೀನಶುದ್ಧಿ । ಯಿಲ್ಲದೆನಾಯಿ
ಬಾಲದಂತಕ್ಕು ಸರ್ವಜ್ಞ ॥ ೩೧ ॥
ಕತ್ತೆಬೂದಿಯಹೊರಳೆ । ಭಕ್ತನಂತಾಗುವುದೆ ?
ತತ್ವವನರಿಯದೇಭಸಿತ । ವಿಟ್ಟರೆಶುದ್ಧ
ಕತ್ತೆಯಂತಕ್ಕು ಸರ್ವಜ್ಞ ॥ ೩೨ ॥
ಹತ್ತಿಯಾಮುರಕಾಯಿ । ಹೊತ್ತಿರ್ದತೆರನಂತೆ
ತತ್ವಭೇದಗಳನರಿಯದೆಯೆ । ರುದ್ರಾಕ್ಷಿ
ಹೊತ್ತುಫಲವೇನು ? ಸರ್ವಜ್ಞ ॥ ೩೩ ॥
ಕಾದಬೂದಿಯಪೂಸಿ । ಕೋದಕಾವಿಯಹೊದ್ದು
ಹೋದಾತಯೋಗಿಯೆನಬೇಡ । ಇಂದ್ರಿಯವ
ಕಾದಾತಯೋಗಿ ಸರ್ವಜ್ಞ ॥ ೩೪ ॥
ಪ್ರಾರಬ್ಧಕರ್ಮಕ್ಕೆ । ಆರಯ್ಕೆಯಂತಿರ್ಪ
ಹಾರೈಸಿಭ್ರಮಿಸಿಬಂದುದಕೆ । ತಾನಳುವ
ಆರೂಢಯೋಗಿ ಸರ್ವಜ್ಞ ॥ ೩೫ ॥
ಅಂದಂದಿಗೇನೂರು । ಸಂದಿತೆಂದೆನಬೇಕು
ಬಂದಷಡ್ರಸವಸವಿದುಂಡು । ನಿಜದಲ್ಲಿ
ನಿಂದವನೆಯೋಗಿ ಸರ್ವಜ್ಞ ॥ ೩೬ ॥

ಜಡೆಯುಳ್ಳಹಿರಿಯರಿಗೆ । ಹೆಡೆಯುಳ್ಳಸರ್ಪನಿಗೆ
ನಡುಗುತ್ತನಮಿಸಿನಯದಿಂದೆ । ಎಚ್ಚರನು
ಬಿಡದೆಯಿರೆಭಕ್ತ ಸರ್ವಜ್ಞ ॥ ೩೭ ॥
ಕಪ್ಪರದಲುಂಬುವರು । ಒಪ್ಪರಸಿನಡೆಯುವರು
ತಪ್ಪಿದರೆಹಲ್ಲುಕಳೆವರು । ಮಹಾತುಮರ
ಒಪ್ಪವನುನೋಡು ಸರ್ವಜ್ಞ ॥ ೩೮ ॥
ತಪವನಾಡುವೆನೆಂದು । ಗುಹೆಯುಹೊಕ್ಕಿರಬೇಡ
ತಪದಲ್ಲಿಕೋಪಬಿಡದಿರಲು । ಆತಪವೆ
ತಪತಾಪ ಕಂಡ್ಯ ಸರ್ವಜ್ಞ ॥ ೩೯ ॥
ಖಂಡಿಸಿದಮನವಿಲ್ಲ । ದಂಡಿಸಿದತನುವಿಲ್ಲ
ಕಂಡಕಂಡವರುಹಾರಿದರೆ । ಕೈಲಾಸ
ರಂಡೆಯಹೊರಸೆ ? ಸರ್ವಜ್ಞ ॥ ೪೦ ॥
ಕೋಳಿಕೂಗದಮುನ್ನ । ಮೇಳುವುದುಭಕ್ತಿಯಿಂ
ಭಾಳಲೋಚನನಮತಿಯಿಂದ । ನೆನೆದರವ
ರಾಳಿನಾಳಯ್ಯ ಸರ್ವಜ್ಞ ॥ ೪೧ ॥
ತೆಪ್ಪವನುನಂಬಿದರೆ । ತಪ್ಪದೆತಡಿಗೆತಹುದು
ಸರ್ಪಭೂಷಣನನಂಬಿದರೆ । ಭವಮಾಲೆ
ತಪ್ಪಿಬದುಕುವನಃ ಸರ್ವಜ್ಞ ॥ ೪೨ ॥
ಅರ್ಥಿಗೆಬೆಲೆಯಿಲ್ಲ । ಚಿತ್ತಕ್ಕೆಹೊಲೆಯಿಲ್ಲ
ಬತ್ತಲಿದ್ದವಗೆಭಯವಿಲ್ಲ । ಯೋಗಿಗೆ
ಕತ್ತಲೆಯೆಇಲ್ಲ ಸರ್ವಜ್ಞ ॥ ೪೩ ॥
ಹರನಿಷ್ಠೆಯಿಲ್ಲದವ । ಪರಮರುಷಿಯಪ್ಪನೇ ?
ಹರನಿಷ್ಠೆಯುಳ್ಳಶ್ವಪಚ । ನಾದರೆಯು
ಪರಮಋಷಿ ಕಾಣೊ ಸರ್ವಜ್ಞ ॥ ೪೪ ॥
ಜಾತಿಹೀನರಮನೆಯ । ಜ್ಯೋತಿತಾಹೀನವೇ
ಜಾತಿವಿಜಾತಿಯೆನಬೇಡ । ಶಿವನೊಲಿ
ದಾತನೇಜಾತ ಸರ್ವಜ್ಞ ॥ ೪೫ ॥

ಎಂಜಲೆಂಜಲು ಎಂದು । ಅಂಜುವರು ವಿಪ್ರರು
ಎಂಜಲಿಂದಾದ ತನುವಿರಲು । ಅದನರಿಯ
ದಂಜುವರುನೋಡು ಸರ್ವಜ್ಞ ॥ ೪೬ ॥
ಪಣ್ಣಲಾದಿಗಳೊಳಗೆ । ಡೊಂಕುಬಾಳೆಯುಹಣ್ಣು
ಡೊಂಕುಂಟು ಪೊಳಗೆರುಚಿಯುಂಟು । ಸಜ್ಜನರ
ಡೊಂಕುಲೇಸೆಂದ ಸರ್ವಜ್ಞ ॥ ೪೭ ॥
ಪಣ್ಣಲಾದಿಗಳೊಳಗೆ । ನುಣ್ಪುಯಿಟ್ಟೆಯಹಣ್ಣು (?)
ನುಣ್ಪುಂಟು ಒಳಗೆವಿಷವುಂಟು । ದುರ್ಜನರ
ಸೊಂಪು ಸಲದೆಂದ ಸರ್ವಜ್ಞ ॥ ೪೮ ॥
ದಂತಪಙ್ತಿಯನಡುವೆ । ಯೆಂತಿಹುದುನಾಲಿಗೆಯು
ಅಂತು ದುರ್ಜನರನಡುವೆ । ಸುಜನರದ
ರಂತೆಯಿರಬೇಕು ಸರ್ವಜ್ಞ ॥ ೪೯ ॥
ಮೊಲೆಯಿಲ್ಲದಆವು । ತಲೆಯಲ್ಲಿಕರೆವುದು
ಸಲೆನೇಮುವರಿದು ಕರೆದುಂಬ । ಯೋಗಿಯ
ಕುಲನಾಶವೆಂದಸರ್ವಜ್ಞ ॥ ೫೦ ॥
ಎಲ್ಲಹಿರಿಯರುಗಳು । ಬಲ್ಲಗರುವರುಯೆಲ್ಲ
ನಲ್ಲೆಯರುಬಂದುಪಿಡಿದರೆ । ಲೋಕದೊಳ
ಗೊಲ್ಲದವರಾರು ? ಸರ್ವಜ್ಞ ॥ ೫೧ ॥
ಮೂಲಮಂತ್ರವನರಿದು । ಲೀಲೆಯಿಂದಾಡುತಿಹ
ಶೂಲಿಯಾಶರಣಸತಿಯರನು । ತಾಬಿಟ್ಟ
ಹೇಲೆಂದು ತಿಳಿವ ಸರ್ವಜ್ಞ ॥ ೫೨ ॥
ಮುಟ್ಟಾದವರನೋಡಿ । ಮುಟ್ಟಲಮ್ಮರು ಜನರು
ಮುಟ್ಟುತಾತಡೆದುನರನಾದ । ದೇಹವನು
ಮುಟ್ಟರೇಕೈಯ ? ಸರ್ವಜ್ಞ ॥ ೫೩ ॥
ಮುಟ್ಟಾದಹೊಲೆಯೊಳಗೆ । ಹುಟ್ಟುವರುಜನರೆಲ್ಲ
ಮುಟ್ಟಬೇಡೆಂದುತೊಳಲುವರು । ಹಾರುವರು
ಹುಟ್ಟಿದರುಎಲ್ಲಿ ? ಸರ್ವಜ್ಞ ॥ ೫೪ ॥

* * * * * ॥ ೫೫ ॥

## ೧೦. ಧರ್ಮಪದ್ಧತಿ.

ಅನ್ನವನುನೀಡುವುದು । ನನ್ನಿಯನುನುಡಿಯುವುದು
ತನ್ನಂತೆಪರರತಿಳಿಯುವುದು । ಸ್ವರ್ಗತಾ
ಬಿನ್ನಾಣವಲ್ಲ ಸರ್ವಜ್ಞ ॥ ೧ ॥
ಗಾನವಿದ್ಯೆಯೆಲೇಸು । ಮಾನಪತಿಹಿತಲೇಸು
ಸ್ವಾನುಭಾವಿಗಳಪದಲೇಸು । ಎಲ್ಲಕ್ಕು
ದಾನಿಯೇ ಲೇಸು ಸರ್ವಜ್ಞ ॥ ೨ ॥
ಬೆಂದುದನೆತಾಬಿತ್ತಿ । ತಿಂದವರನಾಕಾಣೆ
ಬೆಂದುದನೆಬಿತ್ತಿಬೆಳೆದು । ಉಂಬವನೋಡೆ
ಇಂದುಧರತಾನೆ ಸರ್ವಜ್ಞ ॥ ೩ ॥
ಅರಿತಕರ್ಮವಬಿಟ್ಟು । ನೆರೆಮಾಡೆಧರ್ಮವನು
ಸಿರಿಬಂದುಸೇರ್ಗು ಶಿವನೊಲಿವ । ಧರೆಯೆಲ್ಲ
ವೆರಗುವುದುಅವಗೆ ಸರ್ವಜ್ಞ ॥ ೪ ॥
ಪರರಿಗುಪಕಾರಗಳ । ನೆರೆಮಾಳ್ಪಮಾನವನ
ಪರಶಿವನುಕಳುಹಲವಬಂದು । ಧರೆಯೊಳಗೆ
ವರವೀವುತಿಹನು ಸರ್ವಜ್ಞ ॥ ೫ ॥
ಇಕ್ಕುವವನೂರಿಗೆ । ಒಕ್ಕಲೆಂದೆನಬೇಡ
ಅಕ್ಷಯದಪದವಪಡೆದು । ಕೈಲಾಸದಿಂ
ದೊಕ್ಕಲುಬಂದ ಸರ್ವಜ್ಞ ॥ ೬ ॥
ಹುಟ್ಟಿದಾಗಲೆ ಧನವ । ಮೊಟ್ಟೆಕಟ್ಟಿಳಿದನೆ?
ಕಟ್ಟೊಯ್ಯಲರಿಯನದನರಿತು । ಕಡೆಯಲ್ಲಿ
ಕೊಟ್ಟುಂಬ ದಾನಿ ಸರ್ವಜ್ಞ ॥ ೭ ॥
ಕೊಟ್ಟದ್ದು ತನಗೆ ಬೈ । ತಿಟ್ಟದ್ದು ಪರರಿಂಗೆ ।
ಕೊಟ್ಟನಾಕೆಟ್ಟನೆನಬೇಡ । ಅದುಮುಂದೆ
ಕಟ್ಟಿಹುದು ಬುತ್ತಿ ಸರ್ವಜ್ಞ ॥ ೮ ॥

ಹೆಂಡಿರಣುಗರಿಗೆಂದು । ದಂಡಿಸಿಯೆ ದೇಹವನು
ಕಂಡವಸ್ತುಗಳಕೊಡದೆ । ಬೈಚಿಟ್ಟರೆ
ಕಂಡವರಿಗಹುದು ಸರ್ವಜ್ಞ ॥ ೯ ॥
ಮರಣವಹುದೇ ಸತ್ಯ । ಹರನಾಣೆ ಹುಸಿಯಲ್ಲ
ತರುಣಿಯರಿಗಿರಿಸೆ ಪರರುಂಬ । ರಿದನರಿತು
ವರದನಾಗೈಯು ಸರ್ವಜ್ಞ ॥ ೧೦ ॥
ಈವನಿಗೆದೇವನಿಗೆ । ಯಾವುದಂತೆರವಯ್ಯ?
ದೇವನುದ್ಯೋಗದಿಂ ಕೊಡುವ । ಬಿಡದೆ ಕೈ
ಗೀವನೇ ದೇವಸರ್ವಜ್ಞ ॥ ೧೧ ॥
ದಾನದುರುಫಲದಿಂದ । ಶ್ರೀನಾಥನಾಗುವನು
ಭಾನುಮಂಡಲವನುಗಿದು । ತ್ರೈಲೋಕಕ್ಕೆ
ತಾನೊಡೆಯನಹನು ಸರ್ವಜ್ಞ ॥ ೧೨ ॥
ಬಿದರೆ ಅಂದಳವಕ್ಕು । ಬಿದರೆ ಸತ್ತಿಗೆಯಕ್ಕು
ಬಿದಿರಿದರೆ ಸಕಲಫಲವಕ್ಕು । ಲೋಕದೊಳು
ಬಿದರದವಕೆಟ್ಟ ಸರ್ವಜ್ಞ ॥ ೧೩ ॥
ಕಾಣಿಯನುಗಳಿಸಲು । ಕಾಣಿಯಾಗಿಯೆ ಇಹುದು
ಕೇಣದಿಂ ಗಳಿಸಿ ಕಡೆಯಲ್ಲಿ । ತಪವೆಸಗು
ಪ್ರಾಣಶಾಶ್ವತವೆ? ಸರ್ವಜ್ಞ ॥ ೧೪ ॥
ಆನೆಯನು ಏರುವಗೆ । ದಾನವನು ಮಾಡುವಗೆ
ಭಾನುಮಂಡಲದ ಪದವಿ । ಧರಿಸಿದಗೆ
ತಾನೊಲಿವ ಹರನು ಸರ್ವಜ್ಞ ॥ ೧೫ ॥
ಶ್ರೀಗೌರಿಯ ಛಾಯೆ । ಮೇಗಿರ್ಪಬೆಳುಗೊಡೆಯು
ಭೋಗಹಡಪಿಗರ ಪಡೆಯುವೊಡೆ । ದಾನಗಳ
ಬೇಗಮಾಡುವುದು ಸರ್ವಜ್ಞ. ॥ ೧೬ ॥
ಇಕ್ಕಿದವನೂರಿಗೆ । ಒಕ್ಕಲೆಂದೆನಬೇಡ
ಇಕ್ಕಿಯೆರೆದವನೆ ತಾನು । ಕೈಲಾಸಕ್ಕೆ
ಒಕ್ಕಲುಹೋದ ಸರ್ವಜ್ಞ ॥ ೧೭ ॥

ಇಕ್ಕಿದಾತನುಉಂಡು । ನಕ್ಕುಸ್ವರ್ಗಕೆಹೋದ
ಇಕ್ಕದಾತನು ಹೋದ ನರಕಕ್ಕೆ । ಲೋಕದೊಳು
ಇಕ್ಕಲೇಬೇಕು ಸರ್ವಜ್ಞ ॥ ೧೮ ॥
ಉತ್ತಮದದೇವಾಂಗ । ವಸ್ತ್ರವನ್ನುಡುವೊಡೆ
ಮುತ್ತುಮಾಣಿಕವ ಪಡೆಯುವಡೆ । ಮಾಡುನೀಂ
ನಿತ್ಯದಾನವನು ಸರ್ವಜ್ಞ ॥ ೧೯ ॥
ನಲ್ಲಳನು ಬಯಸುವೊಡೆ । ಬಲ್ಲಿದನುಯೆನಿಸುವೊಡೆ
ನಿಲ್ಲದೇಶಿವನ ಭಜಿಸುವೊಡೆ । ಹಸಿದರ್ಗೆ
ಇಲ್ಲೆನ್ನದಿಕ್ಕು ಸರ್ವಜ್ಞ ॥ ೨೦ ॥
ಹಸನಾಗಿಬದುಕುವೊಡೆ । ಕುಶಲನೆಂದೆನಿಸುವೊಡೆ
ಪಶುಪತಿಯಪದವಪಡೆಯುವೊಡೆ । ಹಸಿದರ್ಗೆ
ಅಶನವಿಕ್ಕುವುದುಸರ್ವಜ್ಞ ॥ ೨೧ ॥
ಮಂದಿಯನುಆಳುವೊಡೆ । ಅಂದಣವನೇರುವೊಡೆ
ಸಂಧಿಸಿದಭೋಗಪಡೆಯುವೊಡೆ । ಧರ್ಮವನು
ಕುಂದದೇಮಾಡು ಸರ್ವಜ್ಞ ॥ ೨೨ ॥
ದೇಶವನ್ನಾಳುವೊಡೆ । ಹಾಸಿಗೆಯಲೊರಗುವೊಡೆ
ಈಶಸನ್ನಿಧಿಯಸೇರುವೊಡೆ । ಧರ್ಮವನು
ಮಾಸದೇಮಾಡು ಸರ್ವಜ್ಞ ॥ ೨೩ ॥
ಸಿರಿಬಂದಕಾಲದಲಿ । ಕರೆದುಧರ್ಮವಮಾಡು
ಪರಿಣಾಮವಕ್ಕುಪದವಕ್ಕು । ಕೈಲಾಸ
ನೆರೆಮನೆಯೆಅಕ್ಕು ಸರ್ವಜ್ಞ ॥ ೨೪ ॥
ಸೂಕ್ಷ್ಮವಾದರುವೊಂದು । ಭಿಕ್ಷವಿಕ್ಕಲುಬೇಕು
ಅಕ್ಷಯದಪದವಿತನಗಕ್ಕು । ಯಿಕ್ಕದೊಡೆ
ಭಿಕ್ಷುಕನೆಅಕ್ಕುಸರ್ವಜ್ಞ ॥ ೨೫ ॥
ತಿರಿದುತಂದೊಬ್ಬನನು । ಕರೆದುಕೊಂಡುಣಬೇಕು
ಕರೆಯದೆಯೆತಾನೆಉಣುತಿರಲು । ಆಊಟ
ನರಕದಾಊಟಸರ್ವಜ್ಞ ॥ ೨೬ ॥

ಎತ್ತಣಾಹನಿಬಿದ್ದು । ಮುತ್ತಾದತೆರನಂತೆ
ಉತ್ತಮದಗತಿಯಪಡೆಯುವೊಡೆ । ಯತಿಗೊಂದು
ತುತ್ತುನೀಡೆಂದಸರ್ವಜ್ಞ ॥ ೨೭ ॥
ಸ್ವಾತಿಯಾಮುಳೆಬಿದ್ದು । ಜಾತಿಮುತ್ತಾದಂತೆ
ಸಾತ್ವಿಕನಪ್ಪಯತಿಗಿಕ್ಕೆ । ಸುಖವೀವ
ಜಾತಿರತ್ನವುತಾನುಸರ್ವಜ್ಞ ॥ ೨೮ ॥
ಅನ್ನವನುಇಕ್ಕುವ । ಚೆನ್ನಜಾತಿಯುತಾನೆ
ಅನ್ನವನುಇಕ್ಕದುಣುತಿರ್ಪ । ನಾಯಿ
ಕುನ್ನಿಗಿಂಕಡೆಯುಸರ್ವಜ್ಞ ॥ ೨೯ ॥
ಅಡುವರೇಮಡಿಕೆಯನು । ಕುಡಿಯುವರೆನೀರನ್ನು
ಪಡುವರೇತಾವಕೊಡುವುದು । ಇವ್ರುಮೂರು
ಬಡವರದಾನಸರ್ವಜ್ಞ ॥ ೩೦ ॥
ಪಾತಕವನೂಕುವೊಡೆ । ಭೂತವನುಕಳೆಯುವೊಡೆ
ಭೂತೇಶನೊಲಿಮೆಪಡೆಯುವೊಡೆ । ಹಸಿದರ್ಗೆ
ಕಾತರಿಸದಿಕ್ಕು ಸರ್ವಜ್ಞ ॥ ೩೧ ॥
ಬಿಟ್ಟಡಂಭರಿಗಿತ್ತು । ಕೆಟ್ಟುಹೋಗಲುಬೇಡ
ಸೃಷ್ಟಿಗೀಶ್ವರನಶರಣರ್ಗೆ । ಈಯಲು
ಶ್ರೇಷ್ಠಪದವಹುದು ಸರ್ವಜ್ಞ ॥ ೩೨ ॥
ಕೊಡುವಾತನೇಶಿವನು । ಪಡೆವಾತನೇನರನು
ಒಡಲಭೂತಗಳುಕೆಡೆದು । ಹೋಗದಮುನ್ನ
ಕೊಡುಪಾತ್ರವರಿತು ಸರ್ವಜ್ಞ ॥ ೩೩ ॥
ಕೈಯಲುಂಬುದುಲೇಸು । ಬೈಯದಾಸೊಸೆಲೇಸು
ಅಯ್ಯಬಾರೆಂಬಮುಗಲೇಸು । ಧರ್ಮವನು
ಕೈಯಾರೆನೀಡುಸರ್ವಜ್ಞ ॥ ೩೪ ॥
ಕೈಯಾರೆನೀಡದೇ । ಮೈಯಾರೆಬಳಲದೇ
ಅಯ್ಯಶಿವನೆಂದು ನೆನೆಯದೆ । ಕೈಲಾಸ
ಕೈಯಮುಂಚಿಗೆಯೆ ? ಸರ್ವಜ್ಞ ॥ ೩೫ ॥

ಲೇಸಿನಾನುಡಿಯಿಲ್ಲ । ವಿಶಾಸಲಿನತನುವಿಲ್ಲ
ಈಶನಪೂಜೆತನಗಿಲ್ಲ । ಕೈಲಾಸ
ವೇಶಿಯುವುನೆಯೆ ? ಸರ್ವಜ್ಞ ॥ ೩೬ ॥
ಏನುಬೇಡಿದೊಡೊಬ್ಬ । ದಾನಿಯುನೆಬೇಡುವುನು
ದೀನನಂಬೇಡಿಬಳಲಿದರೆ । ಆದೀನ
ನೇನುತಾಕೊಡುವ ? ಸರ್ವಜ್ಞ ॥ ೩೭ ॥
ಬೇಡಿದರೆಬೇಡುವುದು । ಮಾಡುವಾಧರ್ಮಿಯನು
ಮೂಢಮೂರ್ಖರನು ಪೀಡಿಸಿ । ಪಿಸುಣಿಗಳ
ಬೇಡಲೇಬೇಡ ಸರ್ವಜ್ಞ ॥ ೩೮ ॥
ಕೊಡುವರೇಗಂಟಿದ್ದು । ಯೆಡೆನೂರುಗಾವುದವೆ ?
ತಡೆಯುದಿನ್ನೊಮ್ಮೆಬಾರೆಂಬ । ಧರ್ಮಿಯು
ಕೊಡುವುದೇ ಹುಸಿಯು ಸರ್ವಜ್ಞ ॥ ೩೯ ॥
ದಾನವೆಂದರೆ ತಲೆಯ । ಚಾಣದಲಿಕಡಿದಂತೆ
ತಾನೊಂದು ತಪ್ಪಮಾಡಿದರೆ । ನೂರಾರು
ಮೌನದಿಂಕೊಡುವ ಸರ್ವಜ್ಞ ॥ ೪೦ ॥
ಕಟ್ಟೆಯನುಕಟ್ಟಿದರೆ । ಬಿಟ್ಟುಕಳೆ ಕೋಡಿಯನು
ಕೆಟ್ಟಕಕ್ಕುಲಿತೆಮಾಡಿದರೆ । ಆ ಕಟ್ಟೆ
ಕೆಟ್ಟುಹೋಗುವುದು ಸರ್ವಜ್ಞ ॥ ೪೧ ॥
ಕೋಡಿಯನುಕಡಿದರೆ । ಕೇಡಿಲ್ಲವಾಕೆರೆಗೆ
ಮಾಡುವಾಧರ್ಮಮನಮುಟ್ಟಿ । ಮಾಡಿದರೆ
ಈಡೇರುತಿಹನು ಸರ್ವಜ್ಞ ॥ ೪೨ ॥
ಧರ್ಮಕರ್ಮದಮಾರ್ಗ । ಮರ್ಮನೋಡೆಂದವನು
ಕರ್ಮಮಾಡಿದನಹೆಗಲೇರಿ । ಮತ್ತೊಬ್ಬ
ಧರ್ಮಿಬರುತಿರುವ ಸರ್ವಜ್ಞ ॥ ೪೩ ॥
ಪಾಪಪುಣ್ಯಗಳೆರಡು । ವ್ಯಾಪಿಸುತ್ತಂದಳವ
ಪಾಪಮಾಡುವನಹೆಗಲೇರಿ । ಮತ್ತೆಕುಲ
ದೀಪಬರುತಿರ್ಪ ಸರ್ವಜ್ಞ ॥ ೪೪ ॥

ಕೊಡುವವನಧರ್ಮಕ್ಕೆ । ಕಡೆಯೇನು? ಮೊದಲೇನು ?
ಎಡತಾಕಿಕೊಂಡು ಕೊಡುವವನ । ಧರ್ಮವು
ಕೊಡಲಿಯುಗಾಯು ಸರ್ವಜ್ಞ ॥ ೪೫ ॥
ಆಗಬಾ ಈಗಬಾ । ಹೋಗಿಬಾ ಯೆನ್ನದೇ
ಆಗಲೇಕರೆದು ಕೊಡುವವನ । ಧರ್ಮಹೊಂ
ನಾಗದೇಇರದು ಸರ್ವಜ್ಞ ॥ ೪೬ ॥
ಸೊಡರೆಣ್ಣೆತೀರಿದರೆ । ಕೊಡನೆತ್ತಿಯೆರೆವರೇ ?
ಕೊಡಬೇಡ ಕೊಡದೆಇರಬೇಡ । ಧರ್ಮವನು
ಬಿಡಬೇಡವೆಂದ ಸರ್ವಜ್ಞ ॥ ೪೭ ॥
ಕೊಟ್ಟು ಕುದಿಯಲುಬೇಡ । ಇಟ್ಟಾಡಿಕೊಳಬೇಡ
ಕೊಟ್ಟು ನಾ ಕೆಟ್ಟೆನೆನಬೇಡ । ಶಿವನಲ್ಲಿ
ಕಟ್ಟಿದಾಬುತ್ತಿ ಸರ್ವಜ್ಞ ॥ ೪೮ ॥
ಕೊಟ್ಟುಹುಟ್ಟಿದನಿಲ್ಲ । ಹುಟ್ಟಿಪಡೆಯಲಿಲ್ಲ
ಸಿಟ್ಟಿನಲಿಶಿವನಬೈದರೆ । ಶಿವತನ್ನ
ಬಿಟ್ಟುಕೊಟ್ಟಾನೆ ? ಸರ್ವಜ್ಞ ॥ ೪೯ ॥
ಛತ್ರದಾನೆಳಲಡಿಯು । ಸುತ್ತಿಬರುವನನೋಡಿ
ಎತ್ತಣಧರ್ಮವೆನಬೇಡ । ಅದುಕೊಟ್ಟ
ಉತ್ತಮುದಫಲವು ಸರ್ವಜ್ಞ ॥ ೫೦ ॥
ಅನ್ನದಾನಕ್ಕಿಂತ । ಇನ್ನುದಾನಗಳಿಲ್ಲ
ಅನ್ನಕ್ಕೆಮೇಲು ಯಿನ್ನಿಲ್ಲ । ಲೋಕಕ್ಕೆ
ಅನ್ನವೇಪ್ರಾಣ ಸರ್ವಜ್ಞ ॥ ೫೧ ॥
ಉಳ್ಳಾಗವುಣಲೊಲ್ಲ । ವುಳ್ಳಾಗವುಡಲೊಲ್ಲ
ಉಳ್ಳಾಗದಾನಕೊಡಲಿಲ್ಲ । ದವನೊಡವೆ
ಕಳ್ಳಂಗೆನೃಪಗೆ ಸರ್ವಜ್ಞ ॥ ೫೨ ॥
ಉಣ್ಣದೊಡವೆಯುಗಳಿಸಿ । ಮಣ್ಣೊಳಗೆಬೈಚಿಟ್ಟು
ಚೆನ್ನಾಗಿನೆಲಸಾರಿಸಿವನ । ಬಾಯೊಳಗೆ
ಮಣ್ಣುಕಾಣಯ್ಯ ಸರ್ವಜ್ಞ ॥ ೫೩ ॥

ಹೊದ್ದುದನುಜೈತುಹೊರ । ಗಿದ್ದುದನುಬಯಸುವನು
ಇದ್ದುಉಣವವನಬಾಯೊಳಗೆ । ಕತ್ತೆಯಾ
ಲದ್ದಿಬಿದ್ದಂತೆ ಸರ್ವಜ್ಞ ॥ ೫೪ ॥
ಉಣ್ಣೆಕೆಚ್ಚಲೊಳಿರ್ದು । ಉಣಲರಿಯದಮೃತವನು
ಪುಣ್ಯಕ್ಕೆಲಕ್ಷ್ಮಿಬಯಸಿದೊಡೆ । ಮರ್ತ್ಯದಲಿ
ಉಣ್ಣದವರುಂಟೆ ? ಸರ್ವಜ್ಞ ॥ ೫೫ ॥
ಕೊಟ್ಟಿರ್ದಕಾಲಕ್ಕೆ । ಅಟ್ಟುಣ್ಣಲರಿಯದೆ
ಹುಟ್ಟಿಕ್ಕಿಜೇನುಅಣಿಮಾಡಿ । ಪರರಿಂಗೆ
ಬಿಟ್ಟುಹೋದಂತೆ ಸರ್ವಜ್ಞ ॥ ೫೬ ॥
ಒಡಲಕಟ್ಟಿಯೆತಾನು । ಒಡವೆಯನುಗಳಿಸುವನು
ಒಡವೆತಾನುಣ್ಣಲರಿಯದೆ । ಸತ್ತೊಡಾ
ಒಡವೆಸುಡಬೇಕೆ ? ಸರ್ವಜ್ಞ ॥ ೫೭ ॥
ಕಂಡವರಒಡವೆಯನು । ದಂಡಿಸೀತೆಕ್ಕೊಂಡು
ಉಂಡುಂಡುತಾನುಮಡಿದರೆ । ಅವಗೆಯಮ
ದಂಡತಪ್ಪುವುದೆ ? ಸರ್ವಜ್ಞ ॥ ೫೮ ॥
ಬೇಡಿಕಷ್ಟವಮಾಡಿ । ಕೂಡಿಸಿದಅರ್ಥವನು
ರೂಢಿಗೀಶ್ವರನಶರಣರ್ಗೆ । ನೀಡಿದರೆ
ಮಾಡಿದಾಪುಣ್ಯ ಸರ್ವಜ್ಞ ॥ ೫೯ ॥
ಇದ್ದಾಗಲುಣ್ಣದೇ । ಎದ್ದಾಗಲುಂಡಾನೆ ?
ಬಿದ್ದದೇಹವನುಗುದ್ದಿ । ಗೋಳಿಡುವಾಗ
ಬುದ್ಧಿಬಂದುಪುದೆ ? ಸರ್ವಜ್ಞ ॥ ೬೦ ॥
ಆಡದೆಯೆಮಾಡುವನು । ರೂಢಿಯೊಳಗುತ್ತಮನು
ಆಡಿಮಾಡುವನುಮಧ್ಯಮನು । ಅಧಮತಾ
ನಾಡಿಮಾಡದವ ಸರ್ವಜ್ಞ ॥ ೬೧ ॥
ಕಂಡಪರುಸೇರರು । ಹೆಂಡಿರೂಹೋರುವರು
ಖಂಡಿತದಿಲಕ್ಷ್ಮಿತೊಲಗುವಳು । ಇದುಸತ್ಯ
ಖಂಡಪರಶುಪಿನಾಣೆ ಸರ್ವಜ್ಞ ॥ ೬೨ ॥

ಹೊನ್ನನ್ನುಹೆಣ್ಣನ್ನು । ಮಣ್ಣಿನಾಬಿಲ್ಲೆಯನು
ಹಣ್ಣಿಸಿಯೆಜಗಕೆ ನೆರೆಯಾಡಿ । ಕೆಡಹುವವು
ಕೃಣ್ಣನನೋಡು ಸರ್ವಜ್ಞ ॥ ೬೩ ॥
ಕೊಟ್ಟಲ್ಲಿ ಬಾರದದು । ಇಟ್ಟಲ್ಲಿಹೋಹುದು
ಮುಟ್ಟಲೂಕೈಯಲ್ಲಿನಿಲದು । ಜಗದೀಶ
ಕೊಟ್ಟಲ್ಲದಿಲ್ಲ ಸರ್ವಜ್ಞ ॥ ೬೪ ॥



ಹರಕೊಟ್ಟಕಾಲಕ್ಕೆ । ಹರನರೂಪಿಗೆನೀಡು ।
ಹರದೆಯರುಸುತರುನೆರೆಸವಿದು । ತಾಸವಿದು
ಹರನಬೇಡುವುದು ಸರ್ವಜ್ಞ ॥ ೬೫ ॥
ಕರದಿಕಪ್ಪರವುಂಟು । ತಿರಿದುಂಬನಾಡುಂಟು
ಹರನೆಂಬ ದೈವನಮಗುಂಟು । ನಮಗಿಂತ
ಸಿರಿವಂತರಾರು ಸರ್ವಜ್ಞ ॥ ೬೬ ॥



* * * * * ॥ ೬೭ ॥

## ೧೧. ರಾಜನೀತಿ ಪದ್ಧತಿ.

ಅರಸನೋಲಗದೊಳಗೆ । ಸರಸವನ್ನಾಡದಿರು
ವಿರಸನಿಂದೆಯಲಿ ನಿಲ್ಲದಿರು । ಒಬ್ಬನಕೂಡೆ
ಭರವಸವುಬೇಡ ಸರ್ವಜ್ಞ ॥ ೧ ॥
ಎದ್ದುಮಾತಾಡದಿರು । ಎದ್ದಿದ್ದುನಿಲ್ಲದಿರು
ಇದ್ದಮಾನವರಜರೆಯದಿರು । ಓಲಗದೊ
ಳಿದ್ದುಮಿಲ್ಲೆನಿಸು ಸರ್ವಜ್ಞ ॥ ೨ ॥
ಮೆಚ್ಚಿದಂತರಸನಾ । ಇಚ್ಛೆಯಂತಿರಬೇಕು
ಎಚ್ಚರಿಕೆತಪ್ಪಿನಡೆದರೆ । ಆ ಮೆಚ್ಚು
ಕಿಚ್ಚಿನಂತಕ್ಕು ಸರ್ವಜ್ಞ ॥ ೩ ॥
ಚಿತ್ತರೀತಿಯನರಿದು । ಹತ್ತಿರಿದ್ದೋಲಗಿಸು
ಚಿತ್ತವನುಪಡೆದುಸಿರಿಬರಲು । ಮೊಲನಾಯಿ
ಹತ್ತಿದಂತಕ್ಕು ಸರ್ವಜ ॥ ೪ ॥

ಅರಸೊಲಿದು ನಡಿಸಿದರೆ । ಸಿರಿಯಕ್ಕುಧನವಕ್ಕು
ಕರಿತುರಗಬಲವುಪಿರಿದಕ್ಕು । ದೊರೆಮುನಿಯೆ
ಕಿರಿಯುನಾಯಕ್ಕು ಸರ್ವಜ್ಞ ॥ ೫ ॥
ಹೊನ್ನುಮುನ್ನವೆಯಿಲ್ಲ । ಮನ್ನಣೆಯು ಮೊದಲಿಲ್ಲ
ಬಿನ್ನಣವಕೇಳದರಸ । ನೋಲಗಕಿಂತ
ಸನ್ಯಾಸಲೇಸು ಸರ್ವಜ್ಞ ॥ ೬ ॥
ಬಂದವರನೋಡನು । ನಿಂದವರನುಡಿಸನು
ಹಂದಿಯೂಗಜವುಸರಿಯೆಂಬ । ನೋಲಗವು
ಎಂದಿಗೂಬೇಡ ಸರ್ವಜ್ಞ ॥ ೭ ॥
ನುಡಿಯನಾಲಿಸಿನಡೆಯೆ । ನಡುಗುವುದುಜಗವೆಲ್ಲ
ನುಡಿದರೇಕೇಳಿ ಕಿಡಿಯಪ್ಪ । ನೃಪನ
ಹುಡಿಸುವವರಿಲ್ಲ ಸರ್ವಜ್ಞ ॥ ೮ ॥
ಮಾಳಿಗೆಯುಸಡಲಿದರೆ । ಸೂಳೆಹಲ್ಲುದುರಿದರೆ
ಆಳುವಾಒಡೆಯಮುನಿದರೇ । ಅಲ್ಲಿಂದ
ಹೇಳದೆಯೆಹೋಗು ಸರ್ವಜ್ಞ ॥ ೯ ॥
ತಪ್ಪುಸಾಧಿಸುವವನೊ । ಳಿಪ್ಪವನುಕಡುಹೆಡ್ಡ
ಸರ್ಪನಹೆಡೆಯುನೆಳಲೆಂದು । ಸೇರಿದಾ
ಕಪ್ಪೆಯಂತಕ್ಕು ಸರ್ವಜ್ಞ ॥ ೧೦ ॥
ಬಲ್ಲವರುಹಾವಸೆಯ । ಕಲ್ಲತಾಂಮೆಟ್ಟುವರೆ?
ಬಲ್ಲಿದವರೊಡನೆಸೆಣಸಿದರೆ । ಬಾಯೊಳಿಹ
ಹಲ್ಲುಹೋದಂತೆಸರ್ವಜ್ಞ ॥ ೧೧ ॥
ಎಂತರಸನೊಲಿದರೂ । ಮಂತ್ರಿಯಾಹಗೆಹೊಲ್ಲ
ಅಂತರಸುತಾನಾಗಮುನಿದರೆ । ಆಮಂತ್ರಿ
ಅಂತಸ್ಥನಕ್ಕುಸರ್ವಜ್ಞ ॥ ೧೨ ॥
ಗೆಲ್ಲಲರಿಯದಜೂಜು । ಒಲ್ಲದಾ ಚೆಲುವೆಣ್ಣು
ಹೊಲ್ಲದಾಗುಣದಅರಸನ । ಅತಿಕೂಟ
ಸಲ್ಲದುತನಗೆ ಸರ್ವಜ್ಞ ॥ ೧೩ ॥

ಮಂತ್ರಿಯಾಹಗೆನೃಪನ । ಕಾಂತೆಯರಸಮಗೋಷ್ಠಿ
ಮಂತ್ರವಿಲ್ಲದನಒಡನಾಟ । ಇವುಮೂರು
ಅಂತ್ಯಕಾಲಕ್ಕೆ ಸರ್ವಜ್ಞ ॥ ೧೪ ॥
ಮಂತ್ರಿಯುಳ್ಳಾರಾಜ । ಸಂತಸದಲಿರುತಿಹನು
ಮಂತ್ರಿಯಿಲ್ಲದನರಾಜ್ಯ । ಕೀಲುಗಿದ
ಯಂತ್ರದಂತಕ್ಕು ಸರ್ವಜ್ಞ ॥ ೧೫ ॥
ತಂತ್ರಿವಾದ್ಯವುಲೇಸು । ಮಂತ್ರಿಯಾಕೆಳಿಲೇಸು
ಯಂತ್ರವಾಹಕನ ಕೃಪೆಲೇಸು । ಲೋಕದೆಸ್ವ
ತಂತ್ರವೇಲೇಸು ಸರ್ವಜ್ಞ ॥ ೧೬ ॥
ಕನಡಿಗನಗೆಣೆತನವು । ಮನ್ನೆಯನವಿಶ್ವಾಸ
ತನ್ನಕೈಯಲಗುಪರರಿಗೆ । ಕೊಟ್ಟರೆ
ಬೆನ್ನಕೊಟ್ಟಂತೆ ಸರ್ವಜ್ಞ ॥ ೧೭ ॥
ಅಪಮಾನದೂಟಕಿಂ । ತುಪವಾಸವದುಲೇಸು
ಕೃಪೆಯುಳಿದುಬಡಿವಅರಸನ । ಓಲಗಕಿಂತ
ತಪವಿರಲುಲೇಸು ಸರ್ವಜ್ಞ ॥ ೧೮ ॥
ಬಲ್ಲಿದನುನುಡಿದರೆ । ಬೆಲ್ಲವನು ಮೆದ್ದಂತೆ
ಇಲ್ಲದಬಡವನುಡಿದರೆ । ಬಾಯೊಳಿಹ
ಹಲ್ಲುಬಿದ್ದಂತೆ ಸರ್ವಜ್ಞ ॥ ೧೯ ॥
ಹರಿವನೀರೆಳವಳ್ಳಿ । ತುರಗಚೈತ್ರವುಬಂಡಿ
ಅರಸನಾಮನವು ಬೆಲೆವೆಣ್ಣು । ಇವುಯೇಳು
ತಿರುಹುವವರಿಚ್ಛೆ ಸರ್ವಜ್ಞ ॥ ೨೦ ॥
ಕಂಡದ್ದನುಡಿಯೆಭೂ । ಮಂಡಲವುಮುನಿವುದು
ಕೊಂಡಾಡುತಿಚ್ಚಕವನುಡಿಯೆ । ಜಗವೆಲ್ಲ
ಮುಂಡಾಡುತಿಹುದು ಸರ್ವಜ್ಞ ॥ ೨೧ ॥
ಒಡಲೆಂಬಹುತ್ತಕ್ಕೆ । ನುಡಿವನಾಲಿಗೆಸರ್ಪ
ಕಡುರೋಷವೆಂಬವಿಷತೋರೆ । ತಾನುಗಾ
ರುಡಿಗನಂತಕ್ಕು ಸರ್ವಜ್ಞ ॥ ೨೨ ॥

ಕೆಟ್ಟಿತೆಂದೆಂಬುದನು । ನೆಟ್ಟನೇಅರಿತುಕೋ
ಪಟ್ಟಣದರಸನನ್ಯಾಯ । ನಡೆದರೆ
ಸೃಷ್ಟಿಗೇಕೇಡು ಸರ್ವಜ್ಞ ॥ ೨೩ ॥
ನಾಡೆಂಬದೇಹಕ್ಕೆ । ರೂಢಿಪತಿಯೇಪ್ರಾಣ
ನಾಡಳಿಯೆರೂಢಿಪತಿಕೆಡುಗು । ಅರಸಳಿಯೆ
ನಾಡೆಲ್ಲಕೆಡುಗು ಸರ್ವಜ್ಞ ॥ ೨೪ ॥
ಬಡವನೊಳ್ಳೆಯವನಾತ । ನುಡಿದರಲ್ಲೆಂಬುವರು
ಪೊಡವೀಶ ಬಾಳುಗೆಡೆದರೆ । ಹೊಗಳುತ್ತ
ಕಡುಜಾಣನೆಂಬುವರು ಸರ್ವಜ್ಞ ॥ ೨೫ ॥
ಕುದುರೆಯನು ಏರದೇ । ಕದನವನು ಜಯಿಸದೆ
ಸುದತಿಯರೊಲುಮೆಯರಿಯದ । ಅರಸುತಾ
ಸಿದಿಗೆಯ ಹೆಣನು ಸರ್ವಜ್ಞ ॥ ೨೬ ॥
ಸುಡುವರೇ ಪಂಜುಂಟು । ಬಡಿವಶಬ್ದಗಳುಂಟು
ಪೊಡವಿಯಾಳುವರಮದುವೆ । ವೆಚ್ಚಕ್ಕೊಂದು
ದುಡ್ಡಿತ್ತಲಿಲ್ಲ ಸರ್ವಜ್ಞ ॥ ೨೭ ॥
ಕುದುರೆಯಿಲ್ಲದ ಅರಸು । ಉದಕವಿಲ್ಲದ ವೂಟ
ಸುದತಿಯರು ಇರದಮನೆವಾರ್ತೆ । ಕ್ಷಯರೋಗಿ
ಬದುಕುವುದೆ ಕಷ್ಟ ಸರ್ವಜ್ಞ ॥ ೨೮ ॥
ಮೇಲರಿಯದಧಮರೊಳು । ಕಾಳಗವ ತೊಡಗಿದರೆ
ಬಾಳುವೆಗೆಟ್ಟು ಬಡವಾಗಿ । ಬೆಸಲಾದ
ಜೇಳಿನಂತಕ್ಕು ಸರ್ವಜ್ಞ ॥ ೨೯ ॥
ಬಾಗದಾ ಬಿಲುಕಷ್ಟ । ಹೋಗಿ ಬೇಡಲು ಕಷ್ಟ
ರಾಗವಿಲ್ಲದಿಹನೃಪಕಷ್ಟ । ರಣದೊಳಗೆ
ಹೋಗುವುದು ಕಷ್ಟ ಸರ್ವಜ್ಞ ॥ ೩೦ ॥
ಅಡಿಯು ಮುಂದಿಡೆ ಸ್ವರ್ಗ । ವಡಿಯು ಹಿಂದಿಡೆ ನರಕ
ಅಡಿಗಶ್ವಮೇಧ ಫಲವಕ್ಕು । ಸ್ವಾಮಿ ಕಾರ್ಯಕ್ಕೆ
ಮಡಿಯಲೇ ಬೇಕು ಸರ್ವಜ್ಞ ॥ ೩೧ ॥

ಕರವೆತ್ತಿ ಮುಸೆಯುವನು । ಹಿರಿದೊತ್ತಿ ಕಟ್ಟುವನು
ಅರಿಯು ಬಂದಲ್ಲಿ ಹಿರಿಯದ । ಕತ್ತಿಯನು
ಅರೆದು ಕುಡಿಯುವನೆ? ಸರ್ವಜ್ಞ ॥ ೩೨ ॥
ಇರಿಯದಾಸುರಗಿಯನು । ಶರಿರಮುರಿಯಲು ಹೊತ್ತು
ಅರಿಯು ಬಂದಾಗ ಕಡಿಯದ । ಖಡ್ಗವನು
ಅರೆದು ಮುಕ್ಕುವನೆ? ಸರ್ವಜ್ಞ ॥ ೩೩ ॥
ಹಸಿದರೇ ಉಂಬುದು । ಬ್ಬಸಬಂದರೋಡುವುದು
ಪಸರಿಸಿ ಸಿರಿಯ ಮೆರೆವರೇ । ಕುದುರೆಯನು
ಒಸೆದು ಕಟ್ಟೆಂದ ಸರ್ವಜ್ಞ ॥ ೩೪ ॥
ಕತ್ತಿ ಖಂಡೆಯವೆಲ್ಲ । ಹೊತ್ತಿರ್ದು ಫಲವೇನು?
ಒತ್ತಿ ಬಂದಾಗ ಹಿರಿಯದಾ । ಕತ್ತಿಯನು
ಹೊತ್ತು ಮಾರೆಂದ ಸರ್ವಜ್ಞ ॥ ೩೫ ॥
ಕತ್ತಿಯನು ಪಿಡಿದರೆ । ಶಕ್ತಿಯಲ್ಲಿರಬೇಕು
ಶತ್ರುಗಳು ಬಂದೊದಗೆ ನಿನ್ನ । ಕತ್ತಿಯನು
ಎತ್ತಿ ಹೊಯ್ಯೆಂದ ಸರ್ವಜ್ಞ ॥ ೩೬ ॥
ಚೂರಿಯನು ಬಾಕನ್ನು । ಶೂರತ್ವದಿಂ ಪಿಡಿದು
ಸಾರಿ ರಣದೊಳಗೆ ಸುಳಿದು । ಚೂರಿಯನು
ಸೂರೆನೋಡೆಂದ ಸರ್ವಜ್ಞ ॥ ೩೭ ॥
ಮಂದಿಯಿಲ್ಲದ ಅರಸು । ಕಂದರಿಲ್ಲದ ಭಾಗ್ಯ
ಬಂಧುಗಳುಯಿಲ್ಲದಿಹಬಾಳು । ಲೋಕದೊಳು
ಚಂದತಾನಲ್ಲ ಸರ್ವಜ್ಞ ॥ ೩೮ ॥
ಗುರುಗಳಿಲ್ಲದ ಮಠವು । ಹಿರಿಯರಿಲ್ಲದ ಮನೆಯು
ಅರಸಿಲ್ಲದೂರು ಇವು ಮೂರು । ನುಲಿಬೆಂದ
ಹೊರಸಿನಂತಕ್ಕು ಸರ್ವಜ್ಞ ॥ ೩೯ ॥
ಅಟ್ಟೆಯಿಲ್ಲದ ಪಾದ । ಆಟ್ಟೆಯಾಡವ ತೇಜಿ
ಹೊಟ್ಟೆಗೆಯರಿಲ್ಲದರಮನೆಯು । ಚಂದನವ
ಕುಟ್ಟಿ ಕುಡಿದಂತೆ ಸರ್ವಜ್ಞ ॥ ೪೦ ॥

ಮಧುವು ಇಲ್ಲದ ವೂಟ । ಮುದವ ಬೆಳಸದ ಸತಿಯು
ವಿಧವರಿತು ಕೊಡದ ಅರಸುಗಳು । ಹುಲಿಹೊಕ್ಕ
ಸದನದಂತಕ್ಕು ಸರ್ವಜ್ಞ ॥ ೪೧ ॥
ರಾಗವಿಲ್ಲದ ಹಾಡು । ಭೋಗವಿಲ್ಲದ ನಿದ್ರೆ
ತ್ಯಾಗವಿಲ್ಲದನ ದೊರೆತನವು । ಹಾಳೂರು
ಗೂಗೆಯಿರ್ಪಂತೆ ಸರ್ವಜ್ಞ ॥ ೪೨ ॥
ಅಜ್ಜಿಯಿಲ್ಲದ ಮನೆಯು । ಮಜ್ಜಿಗೆಯನುಳಿದೂಟ
ಕೊಜ್ಜೆಯರು ಇಲ್ಲದರಮನೆಯು । ಇವುಮೂರು
ಲಜ್ಜೆಗೆಟ್ಟಂತೆ ಸರ್ವಜ್ಞ ॥ ೪೩ ॥
ಹಾಡೆಬಲ್ಲವನೋದು । ಕೂಡಿತಪ್ಪದನಂಟು
ಬೇಡಿದ್ದುಕೊಡುವ ದೊರೆಸೇವೆ । ಇವು ಮುನ್ನ
ಮಾಡಿದ ಫಲವು ಸರ್ವಜ್ಞ ॥ ೪೪ ॥
ಅನುವರಿತು ಅಗಲದೇ । ಜನಪತಿಯನೋಲೈಸು
ಧನವಕ್ಕು ತೇಜಪಿರಿದಕ್ಕು । ವೈರಿಗಳು
ತನಗೆ ವಶವಕ್ಕು ಸರ್ವಜ್ಞ ॥ ೪೫ ॥
ಅನ್ನವನು ನೀಡದೇ । ಸನ್ನೆಯನು ನೋಡದೇ
ಮನ್ನಣೆಯ ಮೊದಲನರಿಯದೆ । ಇರ್ಪರಸು
ಕುನ್ನಿಗಿಂಕಡೆಯು ಸರ್ವಜ್ಞ ॥ ೪೬ ॥
ಪರಸತಿಗೆ ಸೋದರನು । ನೆರೆಶತ್ರುದಲ್ಲಣನು
ಕರಪಾಪ ಭೀತಿಇರುತಿರ್ಪ । ನೃಪಗೆತಾಂ
ಸ್ಥಿರವಿಹಳು ಲಕ್ಷ್ಮಿ ಸರ್ವಜ್ಞ ॥ ೪೭ ॥
ದೊರೆತನವ ಮಾಡುವುದು । ಕರೆದನ್ನನೀಡುವುದು
ಉರಗಭೂಷಣನ ನೆನೆವುದು । ಲೋಕದೊಳು
ನರರಲ್ಲವವರು ಸರ್ವಜ್ಞ ॥ ೪೮ ॥
ಸರಸವೆಗ್ಗಳಹೊಲ್ಲ । ಹೊರಸುಜೋಗಿಗೆಹೊಲ್ಲ
ಅರಸುತಿಳಿದರನುನೆಗೆಬರಹೊಲ್ಲ । ಪರಸತಿಯು
ಸರಸತಾನೊಲ್ಲಸರ್ವಜ್ಞ ॥ ೪೯ ॥

ಎರೆಇಲ್ಲದಾರಂಬ । ದೊರೆಯಿಲ್ಲದಾವೂರು
ತರುಣಿಯಿಲ್ಲದನಆಶ್ರಯವು । ನಾಯಿಹಳೆ
ಕೆರವ ಕಡಿದಂತೆ ಸರ್ವಜ್ಞ ॥ ೫೦ ॥
ಅರಸು ಮಡಿದೊಡೆ ಕೇಡು । ವರುಷವಳಿದೊಡೆ ಕೇಡು
ಅರಸುಧಾನ್ಯಕ್ಕೆ ತಾಕೇಡು । ಅವಿಚಾರ
ಅರಸಂಗೆ ಕೇಡು ಸರ್ವಜ್ಞ ॥ ೫೧ ॥
ಆರಾರ ನಂಬಿದರು । ಆರಯ್ದು ನಂಬುವುದು
ನಾರಾಯಣನಿಂದ ಬಲಿಕೆಟ್ಟ । ಮಿಕ್ಕವರ
ನಾರುನಂಬುವರು? ಸರ್ವಜ್ಞ ॥ ೫೨ ॥
ಹಮ್ಮನಾಡಿರಿಯುವುದು । ಬ್ರಹ್ಮನಾದೊಡೆಯೇನು?
ಹಮ್ಮನಾಡಿರಿದು ಕೆಡಬೇಡ । ಇದು ಕಲಿಯು
ಹಮ್ಮನುಳಿಯೆಂದ ಸರ್ವಜ್ಞ ॥ ೫೩ ॥
ಜಾತಿಜಾತಿಯ ಕೂಡಿ । ಘಾತಿಸಿಯೆಮುನಿವವಗೆ
ಜಾತಸ್ಯ ಮರಣ ಧ್ರುವವೆಂಬ । ಶ್ರುತಿಯಿರಲು
ಏತಕಂಜುವರೊ? ಸರ್ವಜ್ಞ ॥ ೫೪ ॥
* * * * ॥ ೫೫ ॥

## ೧೨. ವಿಟಗಾತಿಯರಪದ್ಧತಿ.

* * * * ॥ ೧—೩೩ ॥

## ೧೩. ಸ್ತ್ರೀಯರಪದ್ಧತಿ

ಮಗಳಕ್ಕತಂಗಿಯು । ಮಿಗೆಸೊಸೆಯುನಾದಿನಿಯು
ಜಗದವನಿತೆಯರು ಜನನಿಯು । ಮುಂತಾಗಿ
ಜಗಕೊಬ್ಬಳೈಸೆ ಸರ್ವಜ್ಞ ॥ ೧ ॥
ರುದ್ರನುಕರ್ತೃತಾ । ನರ್ಧ ನಾರಿಯೆಅದ
ಇದ್ದವರಾರು? ಸತಿಯರ । ಹೃದಯವನು
ಗೆದ್ದವರದಾರು? ಸರ್ವಜ್ಞ ॥ ೨ ॥

ಹರಿಯುವುರವನುಪೊಟ್ಟೆ । ಹರನನೆತ್ತಿಯನೇರಿ
ಸರಸಿಜೋದ್ಭವನನೆರೆಕೆಡಿಸಿ । ನಿಂದವರು
ಹಿರಿಯರಿನ್ನಾರು? ಸರ್ವಜ್ಞ ॥ ೩ ॥
ಅಂದುಕಾಮನ ಹರನು । ಕೊಂದನೆಂಬುದುಪುಸಿಯು
ಇಂದುವದನೆಯುರಕಡೆಗಣ್ಣ । ನೋಟದಲಿ
ನಿಂದಿಹನುಸ್ಮರನು ಸರ್ವಜ್ಞ ॥ ೪ ॥
ಕಟ್ಟಾಸೆಬುತ್ತಿಗೆ । ಮೆಟ್ಟಾಸೆಕಾಲಿಂಗೆ
ಪಟ್ಟಣದಾಸೆಹರದಂಗೆ । ನಾಯ್ಗಳಿಗೆ
ಕೆಟ್ಟಮನೆಯಾಸೆ ಸರ್ವಜ್ಞ ॥ ೫ ॥
ಅಳಿಯಾಸೆಹೆಪ್ಪಿಂಗೆ । ಮಳೆಯಾಸೆ ಜಗಕೆಲ್ಲ
ಬಲೆಯಾಸೆವಿಸಾನುಹಿಡಿವಂಗೆ । ನೀಚಂಗೆ
ಕಳುವುದೇಆಸೆ ಸರ್ವಜ್ಞ ॥ ೬ ॥
ಉಟ್ಟುಳಿದುವುಡುವಳು । ಕಟ್ಟುಳಿದು ಮುಡಿವಳು
ಕಟ್ಟೆಯನೇರಿನಗುವಳು । ದುರುಳೆಯುರ
ಕಟ್ಟಾಣಿಕಾಣೊ! ಸರ್ವಜ್ಞ ॥ ೭ ॥
ಗಂಡಗಂಬಲಿಯಿಕ್ಕಿ । ಮೆಂಡಾಗಿತಾನುಂಡು
ಗಂಡಬಂದಾಗನರಳುವ । ಹೆಂಣಿಗೆ
ಗುಂಡಿಗಿಕ್ಕೆಂದ ಸರ್ವಜ್ಞ ॥ ೮ ॥
ಆಕೆಯುನುಕಂಡುಮನೆ । ಯಾಕೆಯುನುಮರೆದರೆ
ಪೂಕೆಯನೇಣುಹರಿದಂತೆ । ಮನೆಯೊಳಿ
ರ್ದಾಕೆತಾಕೆಡುಗುಸರ್ವಜ್ಞ ॥ ೯ ॥
ಸತ್ತವರಬಾಯೊಳಗೆ । ಬತ್ತಿನೀರೆರೆದಂತೆ
ಚಿತ್ತವಿಲ್ಲದಳ ಒಡನಾಟ । ಶುನಿಹೆಣನ
ಹತ್ತಿತಿಂದಂತೆ ಸರ್ವಜ್ಞ ॥ ೧೦ ॥
ಜೇರೂರಸ್ನೇಹಕ್ಕೆ । ಹಾರಿಹೋಗುವಹೆಡ್ಡ
ವಿಸಾರಿದಾಶೂಲದಾಹೆಣಕೆ । ನರಿಯುಬಾ
ಯಾರಿಸತ್ತಂತೆ ಸರ್ವಜ್ಞ ॥ ೧೧ ॥

ಹುಳಿಯಿಲ್ಲದೂಟವೂ । ಮಳೆಯಿಲ್ಲದಾರಂಬ
ಬಳೆಯಿಲ್ಲದವಳನಳಿತೋಳು । ಡೊಂಬರದ
ಗಳೆಯುಮುರಿದಂತೆ ಸರ್ವಜ್ಞ ॥ ೧೨ ॥
ಮೇಡಿನಾಹೊಲವಾಗಿ । ಕಾಡುವೆರಡೆತ್ತಾಗಿ
ಕಾಡುಗಣ್ಣವಳುಸೊಸೆಯಾಗೆ । ಆಮನೆಗೆ
ಕೇಡುತಪ್ಪುವುದೆ? ಸರ್ವಜ್ಞ ॥ ೧೩ ॥
ಕಾರಿನೆರಡೆತ್ತಾಗಿ । ಹೇರುವಮಗನಾಗಿ
ನೀರುಗಣ್ಣವಳುಸೊಸೆಯಾಗೆ । ಆಮನೆಗೆ
ತೂರಿದಾಬೂದಿ ಸರ್ವಜ್ಞ ॥ ೧೪ ॥
ಕೆಂದಸಾದೆತ್ತಾಗಿ । ಮುಂದರಿವಮಗನಾಗಿ
ಒಂದನೂಕಾಣದಾಸೊಸೆಯಾಗೆ । ಆಮನೆಗೆ
ಬಿಂದಿಗೆಯಹೊನ್ನು ಸರ್ವಜ್ಞ ॥ ೧೫ ॥
ಚಿಂಚವೆರಡೆತ್ತಾಗಿ । ಚೀಮಾರಿಸೊಸೆಯಾಗಿ
ಮಿಂಚಾಗಿಮೆರೆವಮಗನಾಗೆ । ಆಮನೆಗೆ
ಲಂಚತಪ್ಪುವುದೆ? ಸರ್ವಜ್ಞ ॥ ೧೬ ॥
ಅಂಡವೆರಡೆತ್ತಾಗಿ । ತುಂಡೊಬ್ಬಸೊಸೆಯಾಗಿ
ಕಂಡದ್ದುಬೇಡುವಮಗನಾಗೆ । ಅಮನೆಗೆ
ದಂಡತಪ್ಪುವುದೆ? ಸರ್ವಜ್ಞ ॥ ೧೭ ॥
ಛಾಯುವಮಾಯುವನುಂಗಿ । ಮಾಯೆಪಾಶವನುಂಗಿ
ಛಾಯುವಮಾಯುವನುಯಮನುಂಗಿ । ಹೆಣ್ಣೆಂಬ
ನಾಯನೆಚ್ಚುವರೆ? ಸರ್ವಜ್ಞ ॥ ೧೮ ॥
ಒಲೆಯಮೇಲಣಹಾಲು । ಚಲಮುಲನೆಕಾದಂತೆ
ಲಲನೆಯರೊಲುಮೆಹೊಳಹುನಡೆಯು । ಇವುಮೂರ
ಕೊಲಿಯುದವರಿಲ್ಲ ಸರ್ವಜ್ಞ ॥ ೧೯ ॥
ಇಪ್ಪವಳಬಿಟ್ಟುತನ । ಗೊಪ್ಪುವಳನೆಚ್ಚಿದರೆ
ಇಪ್ಪುರಿಹರಿದನುಲಿಯಂತೆ । ಮನೆಯೊಳ
ಗಿಪ್ಪವಳುಕೆಡುಗು ಸರ್ವಜ್ಞ ॥ ೨೦ ॥

ಕಂಕಣವಕಟ್ಟಿಸುತ । ಕೊಂಕಿದಾಕುರುಳವಳ
ಪಂಕಜಗಂಧಿಯೆನಬೇಡ । ತಾನೊಲಿದ
ಮಂಕೆಮಾಣಿಕವು ಸರ್ವಜ್ಞ ॥ ೨೧ ॥
ನಂಬಿದಂತಿರಬೇಕು । ನಂಬದೇಇರಬೇಕು
ಇಂಬರಿದು ಯೆಚ್ಚರಿರಬೇಕು । ಹೆಣ್ಣನ್ನು
ನಂಬಿದವಕೆಡುವ ಸರ್ವಜ್ಞ ॥ ೨೨ ॥
ಜಲದಲಿಬಿಸುಟಕಲ್ಲು । ಸಲೆತೇಲಬಲ್ಲುದೇ?
ಲಲನೆಯೊಲಿದಿಹಳುತನಗೆಂಬ । ಮರುಳಂಗೆ
ಮಲೆನಾಗರುಂಟು ಸರ್ವಜ್ಞ ॥ ೨೩ ॥
ಹಳ್ಳದಾಹೊಲವಾಗಿ । ಒಳ್ಳೆವೆರಡೆತ್ತಾಗಿ
ಮೆಳ್ಳೆಗಣ್ಣವಳುಸೊಸೆಯಾಗೆ । ಆಮನೆಗೆ
ಬಳ್ಳದಲಿಹೊನ್ನು ಸರ್ವಜ್ಞ ॥ ೨೪ ॥

* * * * ॥ ೨೫—೩೪ ॥

## ೧೪. ಪ್ರಿಯೆಯರ ಪದ್ಧತಿ.

ಅಂಗನೆಯು ವೊಲಿಯುವುದು । ಬಂಗಾರ ದೊರೆವುದು
ಸಂಗ್ರಾಮದೊಳಗೆ ಗೆಲ್ಲುವುದು । ಇವು ಮೂರು
ಸಂಗೈಯನೊಲುಮೆ ಸರ್ವಜ್ಞ ॥ ೧ ॥
ತಾಳದೋಲೆಯನಿಟ್ಟು । ಬೇಳೆ ಮಣಿಯನುಕಟ್ಟಿ
ವೇಳೆಯನರಿತು ನಡೆವವಳು । ದೊರಕುವುದು
ಶೂಲಿಯಾ ಕರುಣ ಸರ್ವಜ್ಞ ॥ ೨ ॥
ಉರಿಯದೇ ಮೆರೆಯದೇ । ಶಿರವೆತ್ತಿನೋಡದೇ
ಸರಿಬಂದ ಕಡೆಯೊಳಿರುವವಳು । ದೊರಕುವುದು
ಗುರುಕರುಣವೆಂದ ಸರ್ವಜ್ಞ ॥ ೩ ॥
ನಾರಿ ಪರರುಪಕಾರಿ । ನಾರಿ ಸ್ವರ್ಗಕೆದಾರಿ
ನಾರಿ ಸಕಲರಿಗೆ ಹಿತಕಾರಿ । ಮುನಿದರೆ
ನಾರಿಯೇ ಮಾರಿ ಸರ್ವಜ್ಞ ॥ ೪ ॥

ಮನೆಗೆಬಂದಾ ಹೆಣ್ಣು । ವಿನಯದಿಂದೊಲಿಸುತ್ತ
ಮನಮುಟ್ಟಿ ತಾನು ಇರುತಿರಲು । ಅಮೃತದ
ಕೆನೆಯ ಸವಿದಂತೆ ಸರ್ವಜ್ಞ ॥ ೫ ॥
ಅಂದವಿಲ್ಲದ ಊಟ । ಚಂದವಿಲ್ಲದ ಮದುವೆ
ಕಂದನಿಲ್ಲದಳ ಮನೆವಾರ್ತೆ । ಇವು ಮೂರು
ಚಂದವಿಲ್ಲೆಂದ ಸರ್ವಜ್ಞ ॥ ೬ ॥
ಮೊಗೆಯನೀರೊಳಗೊಂದು । ನೆಗಳಾಡಿದಂದಿಗೆ
ತಗುಣಿ ಹೆಬ್ಬುಲಿಯ ನಿರಿದಂದು । ಹೆಣ್ಣಿನಾ
ಬಗೆಯ ನಂಬುವುದು ಸರ್ವಜ್ಞ ॥ ೭ ॥
ಏತದಾಗಣಿ ಚಿಗುತು । ಪೂತುಫಲವಾದಂದು
ಹೋತ ಮದಕರಿಯ ನಿರಿದಂದು । ಹೆಣ್ಣಿನ
ಮಾತನಂಬುವುದು ಸರ್ವಜ್ಞ ॥ ೮ ॥
ಅಡವಿಯಲಿಮಳೆ ಹೊಯ್ದು । ಗಿಡಸೆಡರುಗೊಂಡಂದು
ಹುಡಿಯೊಳು ತಾವರೆ ಬೆಳೆದಂದು । ಹೆಣ್ಣಿನ
ನುಡಿಯನಂಬುವುದು ಸರ್ವಜ್ಞ ॥ ೯ ॥
ಎತ್ತುಗಳು ಎರಡಾಗಿ । ಪುತ್ರರೈವರು ಆಗಿ
ಉತ್ತಮದ ಸತಿಯೊಬ್ಬಳಾಗೆ । ತನಗೆ
ನಿತ್ಯವೂ ಸುಖವು ಸರ್ವಜ್ಞ ॥ ೧೦ ॥
ಅಂಗನೆ ಸುಗುಣಿಯಾಗೆ । ಅಂಗಳದಿ ಹೊರಸಾಗೆ
ತಂಗಾಳಿ ಜೊನ್ನದಿರುಳಾಗೆ । ಬೇಸಗೆಯು
ಹಿಂಗದೇ ಇರಲಿ ಸರ್ವಜ್ಞ ॥ ೧೧ ॥
ಭಂಡಿ ಅಚ್ಚಿಗೆಭಾರ । ಮಿಂಡಿ ಮುದುಕಗೆ ಭಾರ
ಗುಂಡುಗಳು ಭಾರ ಬೈತ್ರಕ್ಕೆ । ಲೋಕಕ್ಕೆ
ಕೊಂಡೆಯನೆ ಭಾರ ಸರ್ವಜ್ಞ ॥ ೧೨ ॥
ಮುಟ್ಟಿದಂತಿರಬೇಕು । ಮುಟ್ಟದೇ ಇರಬೇಕು
ಮುಟ್ಟಿದರೆ ಮುಟ್ಟು ಸತಿಯನ್ನು । ಪರಸತಿಯ
ಮುಟ್ಟಲೇ ಬೇಡ ಸರ್ವಜ್ಞ ॥ ೧೩ ॥

ಊರಿಗೇ ದೊರೆರೂಪು । ನಾರಿಗೇ ಗುಣರೂಪು
ಚಾರುಕೋಗಿಲೆಗೆ ಸ್ವರರೂಪು । ಮನುಜಂಗೆ
ಧೀರತ್ವರೂಪು ಸರ್ವಜ್ಞ ॥ ೧೪ ॥
ಯತಿಯ ತಪಗಳು ಕೆಡುಗು । ಸತಿಯ ಸದ್ಗುಣ ಕೆಡುಗು
ಪ್ರತಿವಂತರೆಲ್ಲ ಮರುಳಕ್ಕು । ಹೆಣ್ಣಿನ
ಶ್ರುತಿಯ ಕೇಳಿದರೆ ಸರ್ವಜ್ಞ ॥ ೧೫ ॥
ಹಾದರದ ಮನೆ ಹೊಲ್ಲ । ಬೀದಿಯಾ ಸಸಿಹೊಲ್ಲ
ಹಾದರದ ಹೆಣ್ಣು ಯಿರಸಲ್ಲ । ಹಳ್ಳಿಗೆ
ಮಾದಿಗನೆ ಹೊಲ್ಲ ಸರ್ವಜ್ಞ ॥ ೧೬ ॥
ಸುರಪನೂ ಶಶಿಯು ತಾ । ಕರಕರೇ ರಾವಣನು
ವರಕೀಚಕಾದಿ ಪಟುಭಟರು । ಕೆಟ್ಟರೈ
ಪರಸತಿಗೆ ಅಳುಪಿ ಸರ್ವಜ್ಞ ॥ ೧೭ ॥
ಹಣಗುಣ ಬಲಗಳುಳ್ಳ । ರಣಧೀರ ರಾವಣನ
ತೃಣವೆಂದು ಸೀತೆಬಗೆಯಳೇ । ಪರಸತಿಯ
ಗೆಣೆಯೆ ಹೊಲ್ಲೆಹವು ಸರ್ವಜ್ಞ ॥ ೧೮ ॥
ಹೆಣ್ಣಿಂದೆ ಇಹವುಂಟು । ಹೆಣ್ಣಿಂದ ಪರವುಂಟು
ಹೆಣ್ಣಿನಿಂ ಸಕಲಪದವುಂಟು । ಮುನಿದರೆ
ಹೆಣ್ಣಿಂದ ಮರಣ ಸರ್ವಜ್ಞ ॥ ೧೯ ॥
ಹೇರುವಾ ಎತ್ತನ್ನು । ಏರುವಾ ಕುದುರೆಯನು
ಚಾರುರೂಪುಳ್ಳ ಹೆಣ್ಣನ್ನು । ಪರರಿಗೆ
ಬೀರುವನೆ ಹೆಡ್ಡ ಸರ್ವಜ್ಞ ॥ ೨೦ ॥
ಏರಿಮೇಲಣ ಪಂಜು । ನೀರೊಳುರಿ ತೋರ್ಪಂತೆ
ನಾರಿಯರೊಲುಮೆ ತನಗೆಂಬ । ಮರುಳಂಗೆ
ಮೋರೆ ಹೊಯ್ದಂತೆ ಸರ್ವಜ್ಞ ॥ ೨೧ ॥
ದಾರಿಯಾ ಮರಬೆಂದು । ನೀರೊಳಗೆ ವುರಿವಂದು
ನಾರಿಯ ರೊಲುಮೆ ತನಗೆಂಬ । ಮರುಳಂಗೆ
ಮಾರಿಹಿಡಿದಿಹುದು ಸರ್ವಜ್ಞ ॥ ೨೨ ॥

ನುಡಿಯಿಲ್ಲದಾ ಮಂತ್ರ। ಗಿಡವಿಲ್ಲದಾ ಮದ್ದು
ಒಡಲರಿಯದಂತೆ ನುಂಗಿದರೆ। ಕಡೆಗೆ
ತಡೆಯ ಹೋಗುವುದೆ? ಸರ್ವಜ್ಞ ॥ ೨೩ ॥

*  *  *  * ॥ ೨೪—೩೦ ॥

## ೧೫. ವೇಶ್ಯಾಪದ್ಧತಿ.

ಹಸ್ತಿಗಿಂ ಬಲ್ಮೆಶಾಂ। ಕಸ್ತಿಯಲಿ ಸಿಂಹಬಲ
ನಸ್ಥಿಯಮುರಿದು ಮಡುಹಿದನು। ಪರಸತಿಯ
ಪ್ರಸ್ತವೇ ಬೇಡ ಸರ್ವಜ್ಞ ॥ ೧ ॥
ಪುರುಷ ಕಂಡರೆಕೊಲ್ವ। ಅರಸು ದಂಡವಕೊಂಬ
ಸುರನರರುಯೆಲ್ಲ ಮುಳಿವರು। ಅಳಿದರೆ
ನರಕ ಪರಸತಿಯು ಸರ್ವಜ್ಞ ॥ ೨ ॥
ಆಳುಸೂಳೆಯು ನಾಯಿ। ಕೋಳಿವ್ಯಾಧನುಗೂಳಿ
ಆಳುವ ತಗರು ಪ್ರತಿರೂಹು। ಕಂಡರೆ
ಕಾಳೆಗವಕ್ಕು ಸರ್ವಜ್ಞ ॥ ೩ ॥
ನೆಗ್ಗಿಲಿನಹೊಲಹೊಲ್ಲ। ಸಿಗ್ಗುವೇಶ್ಯೆಗೆಹೊಲ್ಲ
ಸುಗ್ಗಿಯದಿನಕೆಮಳೆಹೊಲ್ಲ। ಕೊಂಡೆಯನ
ಕಿಗ್ಗಾಳಿಹೊಲ್ಲಸರ್ವಜ್ಞ ॥ ೪ ॥
ಒಂದೆಲಗಮೆಲಹೊಲ್ಲ। ಸಿಂದಕನನೆರೆಹೊಲ್ಲ
ತಂದೆಯನುಬೈವಮಗಹೊಲ್ಲ। ಸೂಳೆಗೆ
ವಂದುಗವುಹೊಲ್ಲಸರ್ವಜ್ಞ ॥ ೫ ॥
ದಾನಿಯನು ಯಾಚಕನು। ಶ್ವಾನತನ್ನೊಡೆಯನನು
ಆನೆಮಾವಟಿಗನರಿವಂತೆ। ಬೋಧಕನು
ಜ್ಞಾನವನುಅರಿವ ಸರ್ವಜ್ಞ ॥ ೬ ॥
ಸೂಳೆಯನುಹೋದಣ್ಣ। ನೇನಾದನೆಂತಾದ
ಹಾಳಾದಕೈಯಹಣಹೋದ। ಮರುದಿವಸ
ಮೂಳನಾಯಾದ ಸರ್ವಜ್ಞ ॥ ೭ ॥

ಕೊಟ್ಟಾತಬರಡಾವ । ಬಿಟ್ಟಾತಹಯನಾದ
ಕೊಟ್ಟವಳಪದವನೆನೆವಾತ । ಲೋಕದೊಳು
ಬಟ್ಟಬಯಲಾದ ಸರ್ವಜ್ಞ ॥ ೮ ॥
ಕಕ್ಕೆಯಾಕಸುಗಾಯಿ । ಬಿಕ್ಕೆಯಾಹುಳಿಗಾಯಿ
ಸೊಕ್ಕಿದಾದಣಿಯ ಬಳಿಸೇವೆ । ಗೆಯ್ವುದಕಿಂತ
ಕಕ್ಕುಲಿತೆಯಿಲ್ಲಸರ್ವಜ್ಞ ॥ ೯ ॥
ಅಲ್ಲಸಿಹಿಯಾದಂದು । ನೆಲ್ಲಿಹಣ್ಣಾದಂದು
ಕಲ್ಲುಪ್ರತಿಮೆಗಳುಕುಣಿದಂದು । ಸೂಳೆಯಾ
ಸೊಲ್ಲುನಂಬುವುದು ಸರ್ವಜ್ಞ ॥ ೧೦ ॥
ಬೆಚ್ಚನೆಯ ಮನೆಯಾಗಿ । ವೆಚ್ಚಕ್ಕೆ ಹೊನ್ನಾಗಿ
ಇಚ್ಛೆಯನರಿವಸತಿಯಾಗೆ । ಆತನಿಗೆ
ಮೆಚ್ಚುಕಾಣಯ್ಯ ಸರ್ವಜ್ಞ ॥ ೧೧ ॥
* * * * ॥ ೧೨—೪೮ ॥

## ೧೬. ಕಾಲಜ್ಞಾನಪದ್ಧತಿ.

ಆಗಮುಗಳಳಿದಾವು । ಗೂಗೆಮುರಕಿಳಿದಾವು
ಕಾಗೆಕಾಳೆದ್ದುಬಡಿದಾವು । ಧೊರೆಗಳು
ಮೂಗರಾದಾರು ಸರ್ವಜ್ಞ ॥ ೧ ॥
ಝುಲ್ಲಿಯಾಬಿಲ್ಲವರು । ಅಲ್ಲಿಗೆಎಲ್ಲರೂ
ಕಲ್ಯಾಣದರಸುಬಸವಣ್ಣ । ಬರುವಾಗ
ಅಲ್ಲಿಚೆಲ್ಲಾಟ ಸರ್ವಜ್ಞ ॥ ೨ ॥
ಸಣ್ಣನೆಯಮೂಗಿನಾ । ಮಣ್ಣಾದತುರುಬಿನಾ
ಅಣ್ಣಗಳೆಲ್ಲಮಡಿವರು । ಚನ್ನಬಸ
ವಣ್ಣಬರುವಾಗ ಸರ್ವಜ್ಞ ॥ ೩ ॥
ಸೂಳೆಯಮಗಹುಟ್ಟಿ । ಆಳುವನುಮುನಿಪುರವ
ಕಾಳಗವಿಲ್ಲದೇಮಡಿಯುವನು । ಆಪುರವು
ಕೋಳುಹೋದೀತು ಸರ್ವಜ್ಞ ॥ ೪ ॥

ಉತ್ತರದದಿಕ್ಕಿನಲಿ। ಹತ್ತೀತುಬಲುಬೇಗೆ
ಸುತ್ತವರಕೊಂದುಬರುವಾಗ। ಜಗವೆಲ್ಲ
ಕತ್ತಲಾದೀತು ಸರ್ವಜ್ಞ ॥ ೫ ॥
ಚಂದ್ರಸೂರ್ಯರಗ್ರಹಣ। ಒಂದೆಮಾಸದಿಬಂದು
ತಂದೆಯನುಕಂದನಿರಿದಂದು। ಲೋಕಕ್ಕೆ
ಬಂದೀತುಪ್ರಳಯ ಸರ್ವಜ್ಞ ॥ ೬ ॥
ಇರುವೆದ್ದುಮುಡಿವಲ್ಲಿ। ಕೆರೆಕಟ್ಟೆಯೊಡೆದೀತು
ಬರನಟ್ಟಬಡಿಯೆಜಗಮುಡಿಯೆ। ಶರಣರು
ಬರುವುದೇಕುರುಹು ಸರ್ವಜ್ಞ ॥ ೭ ॥
ಪಾತಾಳಗಂಗೆಯನು। ಓತುಚಿಪ್ಪಿಲಿಮೊಗೆದು
ಭೂತಳವೆಲ್ಲಉರಿದೆದ್ದು। ಮುಂದೊಬ್ಬ
ದಾತಹುಟ್ಟುವನು ಸರ್ವಜ್ಞ ॥ ೮ ॥
ಚಿಣ್ಣಾನಪಟ್ಟಣವು। ತಣ್ಣಗೆಂದೆನಬೇಡಿ
ಚಿಣ್ಣಿಯಕೋಲುಮಿಡಿದಂತೆ। ಆಪಟ್ಣ
ನುಣ್ಣಗಾಗುವುದು ಸರ್ವಜ್ಞ ॥ ೯ ॥
ಧಾರಿಣಿಯುನಡಗುವುದು। ಮೇರುವಲ್ಲಾಡುವುದು
ವಾರಿಧಿಯುಬತ್ತಿಒಣಗುವುದು। ಶಿವಭಕ್ತಿ
ಯಾರಯ್ಯದಂದು ಸರ್ವಜ್ಞ ॥ ೧೦ ॥
ಒತ್ತಿದಾಜಗಳಕ್ಕೆ। ಸುತ್ತಮುತ್ತಿಗೆಯಾಗಿ
ತೊತ್ತಳದುಳಿದುಕೊಲುವಾಗ। ಉಳುವೆಯ
ಕರ್ತಬಂದಾನು ಸರ್ವಜ್ಞ ॥ ೧೧ ॥
ತಾರಣದವತ್ಸರದಿ। ಕಾರಣವುನಡೆದಾವು
ವಾರಣಾಶಿಯಲಿಗುಡಿಗಟ್ಟೆ। ಬೇಲೂರೊಳ್
ತೋರಣವುಕಟ್ಟ್ಯಾವು ಸರ್ವಜ್ಞ ॥ ೧೨ ॥
ಪಟ್ಟವಿಲ್ಲದಕೂಸು। ಸೃಷ್ಟಿಯನಾಳೀತು
ಪಟ್ಟದರಾಣಿಮುಡಿದಮುರುದಿನ। ಶರಣರ
ಪಟ್ಟಕಾಣಯ್ಯ ಸರ್ವಜ್ಞ ॥ ೧೩ ॥

ನಂದಿಯಾದುರ್ಗವನು । ಅಂದದಲಿತೆಗೆದಾರು
ಚಂದದಲಿತೆಗೆದಆರನೆಯು । ವರುಷಕ್ಕೆ
ಬಂದಾನುಶರಣ ಸರ್ವಜ್ಞ ॥ ೧೪ ॥
ಸುತ್ತುಕೋಟೆಯಮೇಲೆ । ಮುತ್ತೆಕೋಟೆಯಹಾಕಿ
ಮುತ್ತೈದೆಮಗನುಅಳಿದರೆ । ಬಿದರೂರು
ಎತ್ತಿಹೋದೀತು ಸರ್ವಜ್ಞ ॥ ೧೫ ॥
ಎತ್ತನೇರುವನೊಬ್ಬ । ತೊತ್ತಿನಾಮಗನೊಬ್ಬ
ಮುತ್ತುಮಾರುವನದೆಸೆಯಿಂದ । ರಾಜ್ಯಕ್ಕೆ
ಮೃತ್ಯುಕಾಣಯ್ಯ ಸರ್ವಜ್ಞ ॥ ೧೬ ॥
ಮಾದನಾಪುರದಲ್ಲಿ । ಕಾದಿಲಗ್ಗೆಯಮಾಡಿ
ಮಾಧವನಪಡೆಯಸದೆಬಡಿದು । ಕಲ್ಯಾಣ
ಹಾದಿಹಿಡಿದಾನು ಸರ್ವಜ್ಞ ॥ ೧೭ ॥
ಬ್ರಹ್ಮನಾಗಿರಿಯಲ್ಲಿ । ಹೆಮ್ಮಗನುತಂದೆಯಾ
ಹಮ್ಮಿನಿಂತಾನುಮುರಿದಾನು । ಮಲೆನಾಡು
ನಿರ್ಮಲವಕ್ಕು ಸರ್ವಜ್ಞ ॥ ೧೮ ॥
ಬ್ರಹ್ಮನಾಳದಕಿಚ್ಚು । ಒಮ್ಮೆತಾತೀರದು
ಬ್ರಹ್ಮಾಂಡಬೆಂದುಧರೆಬೆಂದು । ಈಕಿಚ್ಚ
ನೆಮ್ಮುವನೆ ಯೋಗಿ ಸರ್ವಜ್ಞ ॥ ೧೯ ॥
ಇಕ್ಕೇರಿಸೀಮೆಯಾ । ಲೆಕ್ಕವನು ಕೇಳಿರೋ
ಇಕ್ಕೇರಿಯದು ಅಳಿದು ಹತ್ತು । ವರುಷಕ್ಕೆ
ಮುಕ್ಕಣ್ಣಬರುವ ಸರ್ವಜ್ಞ ॥ ೨೦ ॥
ತನ್ನನಾಭಿಯ ಕೆಳಗೆ । ವಹ್ನಿಮಂಡಲವುಂಟು ।
ವಹ್ನಿಮಂಡಲದ ಕೆಳಗಣ । ನಾಡಿಯಲಿ
ತನ್ನನೋಡೆಂದ ಸರ್ವಜ್ಞ ॥ ೨೧ ॥
ಬಿಂದುಕಳೆಯೆಂದೆಂಬ । ನಂದನಾವನವುಂಟು
ಇಂದುಧರನೆಂಬ ಕೊಳನುಂಟು । ತಿಳಿನೀರು
ಮಿಂದುಂಬರಿಲ್ಲ ಸರ್ವಜ್ಞ ॥ ೨೨ ॥

ನರಸಿಂಹನವತಾರ । ಹೊರಸೆದ್ದು ಹೋದೀತು
ಅರಸುಗಳೆಲ್ಲ ಮತಿಗೆಟ್ಟು । ಈ ರಾಜ್ಯ
ಸೆರೆಸೂರೆ ಕಾಣೊ ಸರ್ವಜ್ಞ ॥ ೨೩ ॥
ಸಿಡಿಲುಬಳಗದಕೋಟಿ । ಘುಡಿಘುಡಿಸಿರಚ್ಚೆದ್ದು
ಕಡೆಗಡಿಯುಮುರಿದ ಮರುದಿವಸ । ಕರ್ಣಾಟ
ಹುಡಿಹುಡಿಯಕ್ಕು ಸರ್ವಜ್ಞ ॥ ೨೪ ॥
ಆನೆಘನವಳ್ಳಿಯಲಿ ! ಪಾನರನು ಊರುವನು
ಖಾನಖಾನರನು ಮಡುಹುತಲಿ । ಪಟ್ಟಣಕೆ
ತಾನೆಬಂದಾನು ಸರ್ವಜ್ಞ ॥ ೨೫ ॥
ಚೋಳದೇಶದಿಂದ । ಚೋಳರುಬಂದಾರು
ಮೇಳೈಸಿ ಅರಸಿನೊಡಗೂಡಿ । ಬಸ್ತಿಯನು
ಹಾಳುಮಾಡ್ಯಾರು ಸರ್ವಜ್ಞ ॥ ೨೬ ॥
ಭಾಟಿಯಾ ಬಸದಿಯನು । ಆಟದಲಿಒಡೆದಾರು
ಆಟದಾರನೆಯ ವರುಷಕ್ಕೆ । ಶರಣತಾ
ನೀಟಾಗಿ ಬರುವ ಸರ್ವಜ್ಞ ॥ ೨೭ ॥
ಎಂದು ಬಂದಾರೆಂದು ಸಂದೇಹಗೊಳಬೇಡ
ತಂದೆಯಾ ಮಗನುಕೊಂದಂದು । ಬೇಸಗೆಯ
ಮುಂದೆಬಂದಾರು ಸರ್ವಜ್ಞ ॥ ೨೮ ॥
ಬಂಟನಾತಮ್ಮನಾ । ಅಳಿಯಮಾವಂದಿರಿಗೆ
ಗಂಟಿಕ್ಕಿ ಜಗಳಹಣ್ಣಾವು । ಲೋಕಕ್ಕೆ
ಕಂಟಕವಾದಾವು ಸರ್ವಜ್ಞ ॥ ೨೯ ॥
ಕಂದನಾ ಕೈಪಿಡಿದು । ಬಂದಾನುಪಟ್ಟಣಕೆ
ನಿಂದುರಾಜ್ಯವನು ಆಳ್ಯಾನು । ಯಾಗದಾ
ನಂದದೊಳಗಿಹನು ಸರ್ವಜ್ಞ ॥ ೩೦ ॥
ವೀರಶರಭನಹೊಡೆದ । ಈರೈದು ವರುಷಕ್ಕೆ
ಧೀರನರಸಿಂಹನೆಲಸ್ಯಾನು । ಶರಭನು
ಸಾರಿಬರುತಾನೆ ಸರ್ವಜ್ಞ ॥ ೩೧ ॥

ಬಾಟೆಬಸದಿಯವಮಾಡಿ । ಗೂಟತಂತಿಯ ಹಾಕಿ
ನೀಟಾದ ಬಂಡಿಬರುವಾಗ । ಲೋಕದಾ
ಆಟನೋಡೆಂದ ಸರ್ವಜ್ಞ ॥ ೩೨ ॥
ಪಂಚಲೋಹದ ತಗಡು । ಮುಂಚೆಭೂಮಿಗೆ ಹಾಸಿ
ಕಂಚಿನರಥವನಡಿಸ್ಯಾರು । ಆ ರಥವು
ಮಿಂಚು ಹೊಡೆದೀತು ಸರ್ವಜ್ಞ ॥ ೩೩ ॥
ಎತ್ತು ಇಲ್ಲದೆಬಂಡಿ । ಯೊತ್ತೊತ್ತಿನಡಿಸುವರು
ಸುತ್ತಲಾರಾಜ್ಯವಾಳುವರು । ಆ ಮೇಲೆ
ಮೃತ್ಯು ಹೊಂದುವರು ಸರ್ವಜ್ಞ ॥ ೩೪ ॥
ನಂದನಾಹೆಸರಿಂದ । ಬಂದುರಾಜ್ಯವನಾಳಿ
ಬಂಧನಬಿದ್ದುಭಯಗೊಂಡು । ನೀರಿನಲಿ
ಸಂದುಹೋಗುವನು ಸರ್ವಜ್ಞ ॥ ೩೫ ॥

* * * * * ॥ ೩೬—೩೭ ॥

## ೧೭. ವಿಧಿವಾಸನಾಪದ್ಧತಿ.

ಹರಿಹಂದಿಯಾದಂದು । ಹರನುತಿರಿದುಂಡಂದು
ಶಿರವರಿದುಬ್ರಹ್ಮನಿರುವಂದು । ಫಣೆಯಲ್ಲಿ
ಬರೆದವರುಯಾರು? ಸರ್ವಜ್ಞ ॥ ೧ ॥
ಕರ್ಮದಾದೆಸೆಯಿಂದ । ಚರ್ಮವನು ಹರನುಟ್ಟ
ಬ್ರಹ್ಮಕಚ್ಚುಟವಕಟ್ಟಿದನು । ಗೋವಿಂದ
ಎಮ್ಮೆಗಳಕಾಯ್ದ ಸರ್ವಜ್ಞ ॥ ೨ ॥
ಹತ್ತುಭವದಲಿ ಬಂದು । ಎತ್ತುತುರುಗಳ ಕಾಯ್ದು
ಮುತ್ತೆಪಾಂಡವರಿಗಾಳಾದ । ಹರಿಮುನ್ನ
ಎತ್ತಿದಾಕರ್ಮ ಸರ್ವಜ್ಞ ॥ ೩ ॥
ಅಂಕದೊಳಗರ್ಜುನಗೆ । ಶಂಕರನು ಓಡಿದನು
ಲಂಕೆಯಲಿ ಹನುಮನಿಡಿಹೊಡೆದ । ಮಾನವರ
ಬಿಂಕವಿನ್ನೇನು ? ಸರ್ವಜ್ಞ ॥ ೪ ॥

ಅಕ್ಕರವ ತೊಡೆಯುವರೆ। ಮುಕ್ಕಣ್ಣಗಳವಲ್ಲ
ರಕ್ಕಸನು ಸೀತೆಯನೊಯ್ವಾಗ। ಮತ್ತಾರು
ದಿಕ್ಕಾಗಲಿಲ್ಲ ಸರ್ವಜ್ಞ ॥ ೫ ॥
ಕೇಡುಗಳು ಬರುವಾಗ। ಕೂಡುವುವೆ ಬುದ್ಧಿಗಳು?
ಕೋಡಗನು ಲಂಕೆಸುಡುವಾಗ। ರಾವಣನು
ಆಡುಕಾಯ್ದಿಹನೆ ? ಸರ್ವಜ್ಞ ॥ ೬ ॥
ಒಂದು ಹೊಂಭತ್ತು ತಲೆ। ಅಂದ ತೋಳಿಪ್ಪತ್ತು
ಚಂದದಿಂದುಂಡು ಸವಿನೂಡೆ। ಪ್ರಾರಬ್ಧ
ಬಂದುದೇ ಕಾಲ ಸರ್ವಜ್ಞ ॥ ೭ ॥
ಈರೈದು ತಲೆಯುವನ। ಉರೊಪ್ಪುತಿಹಲಂಕೆ
ವಾರಿಧಿಯ ಕಟ್ಟುಹೊಡೆಯಿತು। ಬಂಧನವ
ಮೀರಿದವರಾರು ? ಸರ್ವಜ್ಞ ॥ ೮ ॥
ಕಡಲೇಳು ಸುತ್ತಲೂ। ನಡುವೆ ಲೋಹದ ಕೋಟೆ
ಕಡಲುತಾ ಕಟ್ಟುವಡೆಯಿತು। ಬಂಧನವ
ಬಿಡಿಸುವವರಿಲ್ಲ ಸರ್ವಜ್ಞ ॥ ೯ ॥
ಎತ್ತಣಾ ಲಂಕೆತಾ। ನೆತ್ತಣಅಯೋಧ್ಯೆಯು
ಹತ್ತಿರದ ನಾಡಿನೊಳಗಲ್ಲ। ರಾವಣಗೆ
ಎತ್ತಣಮಾರಿ ? ಸರ್ವಜ್ಞ ॥ ೧೦ ॥
ಆಡಾದನಜಮುನಿಯು। ಕೋಡಗನು ಹನುಮಂತ
ನೋಡು ರಾವಣನ ಬಾಳುವೆಯ। ಕಲ್ಪಿತವ
ಮಾಡಿದವರಾರು ? ಸರ್ವಜ್ಞ ॥ ೧೧ ॥
ಅಡಗಿದ್ದ ಶೂದ್ರಕನ। ಹಿಡಿತಂದು ಕೊಲ್ಲಿಸಿತು
ಪೊಡವಿಯೊಳಗಧಿಕ ಬಲವಂತ। ರಾವಣನ
ಮಡುಹಿತಾ ವಿಧಿಯು ಸರ್ವಜ್ಞ ॥ ೧೨ ॥
ಈ ದೇಶವಲ್ಲೆಂದು। ಆ ದೇಶ ವೈದಿದರೆ
ಹೋದ ಶೂದ್ರಕನ ಶಿರ ಕಂಚಿ। ಯಾಲದಲಿ
ಛೇದಿಸಿತು ವಿಧಿಯು ಸರ್ವಜ್ಞ ॥ ೧೩ ॥

ಗಟ್ಟಿದಾ ಬೆಟ್ಟದಾ । ಇಟ್ಟೆಡೆಯ ಕಿರುಬಿನೊಳು
ಕೆಟ್ಟೋಡಿ ಬಂದುದೆನಬೇಡ । ವಿಧಿಕಾಣ
ದಷ್ಟುದಿಕ್ಕುಂಟೆ? ಸರ್ವಜ್ಞ ॥ ೧೪ ॥
ಕೆಡಕುಬಂದೀತೆಂದು । ಅಡವಿಗೋಡಲುಬೇಡ
ಬಿಡದೋಡಿಭಂಗಪಡಬೇಡ । ವಿಧಿಕಾಣ
ದಡವಿಗಳುಂಟೆ? ಸರ್ವಜ್ಞ ॥ ೧೫ ॥
ಅಲ್ಲಿಯಿರಲೊಲ್ಲದೇ । ಬಲ್ಲಿದರವೊರೆಬಿದ್ದು
ಕಲ್ಲುವಾಳಿಗೆಯ ವೊಳಗಿರಲು । ವಿಧಿತಾನು
ಕೊಲ್ಲದೆಬಿಡದು ಸರ್ವಜ್ಞ ॥ ೧೬ ॥
ಸೀತೆಹೋದುದುಭಂಗ । ಸೇತುಕಟ್ಟಿದಭಂಗ
ಮಾತಿನಭಂಗರಾಮಂಗೆ । ರಾವಣಗೆ
ಯೇತರಭಂಗ? ಸರ್ವಜ್ಞ ॥ ೧೭ ॥
ಹಾಗಿದ್ದೆಹೀಗಿದ್ದೆ । ಹೋಗಿದ್ದೆನೆನಬೇಡ
ಹೋಗಳೇಸೀತೆಸೆರೆವನೆಗೆ । ಮಿಕ್ಕವರು
ಹೇಗಿದ್ದರೇನು? ಸರ್ವಜ್ಞ ॥ ೧೮ ॥
ಹೆತ್ತಯ್ಯನರ್ಜುನನು । ಮುತ್ತಯ್ಯದೇವೇಂದ್ರ
ಮತ್ತೆಮಾತುಳನುಶ್ರೀಹರಿಯು । ಅಭಿಮನ್ಯು
ಗೆತ್ತಣವಿಧಿಯು? ಸರ್ವಜ್ಞ ॥ ೧೯ ॥
ಮಂದರಧರನಿಗಾ । ನಂದವಾಗಿಹಪಾಂಡು
ನಂದನರುತಿರಿದುಂಡರಂದು । ವಿಧಿಮಾಡಿ
ದಂದವನುನೋಡು ಸರ್ವಜ್ಞ ॥ ೨೦ ॥
ಆಡಿದಾನಳಕೆಟ್ಟ । ಆಡಿಧರ್ಮಜಕೆಟ್ಟ
ಕೂಡಿನಾಲ್ವರೊಳಾಡಿತಿರಿದರು । ನೆತ್ತಗಳ
ನಾಡಿದರುಕೆಡರೆ? ಸರ್ವಜ್ಞ ॥ ೨೧ ॥
ಆಡುತಿಹಮಕ್ಕಳಿಗೆ । ಊಡುವಾತಾಯಂತೆ
ಮಾಡಿದಕರ್ಮಬಳಿವಿಡಿದು । ಹಿಡಿತಂದು
ಊಡುತ್ತಲಿಹುದು ಸರ್ವಜ್ಞ ॥ ೨೨ ॥

ಬಂದದ್ದು ನೆರೆಹಾಸಿ । ಬಾರದ್ದು ನೆರೆಹೊದ್ದು
ಬಂದುದರೊಳಗೆಅಡಿಯಿಡಲು । ಪ್ರಾರಬ್ಧ
ವೆಂದಿಗೂ ಯಿಲ್ಲ ಸರ್ವಜ್ಞ ‖ ೨೩ ‖
ಕಂಡದ್ದುಅಡಿಯಾಗಿ । ಕಾಣದ್ದುಮೇಲಾಗಿ
ಕಂಡದ್ದರಿಂದನಡೆವಾತ । ಮೃತ್ಯುವಿನ
ಗಂಡನೆಂದರಿಯೊ! ಸರ್ವಜ್ಞ ‖ ೨೪ ‖
ನಡೆಯುವುದನೇಹಾಸಿ । ನಡೆಯದುದನೇಹೊದ್ದು
ನಡೆಯುವುದರೊಳಗೆಅಡಿಯಿಡಲು । ಆಕಾರ್ಯ
ತಡೆಯದೇಬರ್ಕು ಸರ್ವಜ್ಞ ‖ ೨೫ ‖
ಅಡಿಯೊಡೆದನಂಗಜನು । ಹಿಡಿವಡೆದಹನುಮಂತ
ಪೊಡವಿಗೀಶ್ವರನುತಿರಿದುಂಡ । ಲೋಕವು
ನಡೆದಪಾಡೇನು? ಸರ್ವಜ್ಞ ‖ ೨೬ ‖
ಮಣ್ಣಿಂದಹೆಣ್ಣಿಂದ । ಅಣ್ಣಗಳುಕೆಟ್ಟರು
ಹೆಣ್ಣಿಂದಕೆಟ್ಟದಶಕಂಠ । ಪಾಂಡವರು
ಮಣ್ಣಿಂದಕೆಡರೆ? ಸರ್ವಜ್ಞ ‖ ೨೭ ‖
ಬಲವಂತರಾದರೂ । ಕಲಹದಲಿಕೆಡುವರು
ಚಲವುಳ್ಳದುರ್ಯೋಧನಾದಿ । ಕೌರವರು
ಕಲಹದಿಂಕೆಡರೆ? ಸರ್ವಜ್ಞ ‖ ೨೮ ‖
ಭಂಗವಿಲ್ಲದೊಡೊಂದು । ತಿಂಗಳೇಬಾಳುವರು
ಅಂಗಜನುಸತ್ತಕಪಿಯಿಂದ । ಲಂಕೆಯು
ಭಂಗಪಟ್ಟಂತೆ ಸರ್ವಜ್ಞ ‖ ೨೯ ‖

* * * * ‖ ೩೦–೩೬ ‖

## ೧೮. ಜೈನಪದ್ಧತಿ.

ಕೊಲುವಧರ್ಮವನೊಯ್ದು । ಒಲೆಯೊಳಗೆಇಕ್ಕುವರು
ಕೊಲಲಾಗದೆಂಬಜೈನರ । ಮತವೆನ್ನ
ತಲೆಯಮೇಲಿರಲಿ ಸರ್ವಜ್ಞ ‖ ೧ ‖

ಉಪ್ಪುಸಪ್ಪನೆಯಕ್ಕು । ಕರ್ಪುರವುಕರಿದಕ್ಕು
ಸರ್ಪಂಗೆಬಾಲವೆರಡಕ್ಕು । ಶ್ರವಣರು
ತಪ್ಪಾಡಿದಂದು ಸರ್ವಜ್ಞ ॥ ೨ ॥
ಸೃಷ್ಟಿಗೆಜಿನನಪಟ್ಟ । ಕಟ್ಟಿದರೇತಕ್ಕೊ?
ಕೆಟ್ಟರೇಕೆಡುಗುಜಗವೆಲ್ಲ । ತಲೆಹೋದ
ಅಟ್ಟೆಯಂತಕ್ಕು ಸರ್ವಜ್ಞ ॥ ೩ ॥
ಹೆರಿಹೋದಲುರಗನಾ । ಗರಳತಾತಪ್ಪುವುದೆ?
ಪರತತ್ವಬೋಧೆಯರಿಯದ । ಗುರುಗಳು
ಸಿರಿಯತೊರೆದೇನು? ಸರ್ವಜ್ಞ ॥ ೪ ॥
ಆಚಾರವಹುದೆಂದು । ಲೋಚಗಿಂಡಿಯಪಿಡಿದು
ಭೂಚರರದಿಸತ್ತನವಿಲುಗರಿ । ಗುರುಗಳಿಗೆ
ನೀಚವೆನಿಸುವುದು ಸರ್ವಜ್ಞ ॥ ೫ ॥
ಮುತ್ತುಮೂಗುತಿಗೇಕೆ? । ತೊತ್ತೇಕೆಗುರುಗಳಿಗೆ?
ಬತ್ತಿದಾಕೆರೆಗೆತೂಬೇಕೆ? ಶ್ರವಣರಿಗೆ
ಮಿಥ್ಯೆತಾನೇಕೆ? ಸರ್ವಜ್ಞ ॥ ೬ ॥
ಬಟ್ಟೆತಾವಾಗಿಯೇ । ಬಟ್ಟನಿಟ್ಟೊಪ್ಪುವರು
ನೆಟ್ಟನೇಸ್ವರ್ಗಪಡೆಯುವರೆ । ಸಾಣೆಕಲ್
ಕೆಟ್ಟಕೇಡೇನು? ಸರ್ವಜ್ಞ ॥ ೭ ॥
ಕೊಲ್ಲದಿಪ್ಪುದೆಧರ್ಮ । ಬಲ್ಲರಿಗೆಸನ್ಮಂತ್ರ
ಅಲ್ಲದೇಮಿರಿಕೊಲುವವನು । ನರಕದೊಳು
ನಿಲ್ಲದೇಮಾಣ ಸರ್ವಜ್ಞ ॥ ೮ ॥
ಹೇನುಕೂರೆಗಳನ್ನು । ನೀನಾಗಿಕೊಲಬೇಡ
ಸ್ಥಾನಪಲ್ಲಟವಮಾಡಿದರೆ । ಆಮೇಲೆ
ಏನಾದರೇನು? ಸರ್ವಜ್ಞ ॥ ೯ ॥
ಆವಾವಜೀವವನು । ನೋವನರಿಯದೆಕೊಂದು
ಸಾವಾಗಶಿವನನೆನೆಸಿದರೆ । ಶಿವಬಂದು
ಕಾವನೇನಯ್ಯ? ಸರ್ವಜ್ಞ ॥ ೧೦ ॥

ಎಂತುಪ್ರಾಣಿಯಕೊಲ್ಲ । ದಂತುಟೀಜಿನಧರ್ಮ
ಜಂತುಬಸುರಲ್ಲಿಸತ್ತರೆ । ಆಜೀವಿ
ಯೆಂತಾದಶ್ರವಣ ಸರ್ವಜ್ಞ ॥ ೧೧ ॥
ಆದಿಯಲಿಜಿನನಿಲ್ಲ । ವೇದದಲಿಹುಸಿಯಿಲ್ಲ
ಆದಹೊನ್ನುಗಳುತನಗಿಲ್ಲ । ಸ್ವರ್ಗದಲಿ
ಮಾದಿಗರೆಇಲ್ಲ ಸರ್ವಜ್ಞ ॥ ೧೨ ॥
ಮೊಸರುಯಿಲ್ಲದವೂಟ । ಪಸುರುಇಲ್ಲದತೋಟ
ಹಸನಿಲ್ಲದವಳಒಡಗೂಟ । ಶ್ರವಣನಬಾಯಿ
ಕಿಸುಕೂಳಿನಂತೆ ಸರ್ವಜ್ಞ ॥ ೧೩ ॥

## ೧೯. ದೇಶಪದ್ಧತಿ.

ಆಗ್ಗಸುಗ್ಗಿಗಳುಂಟು । ದೊಗ್ಗಮಜ್ಜಿಗೆಯುಂಟು
ಹೆಗ್ಗುಳದಕಾಯಿಬಹಳುಂಟು । ಮೂಡನಾ
ಡಿಗ್ಗಿನ್ನುಬಹುದೆ ? ಸರ್ವಜ್ಞ ॥ ೧ ॥
ಬಟ್ಟೆಬಟ್ಟೆಯೊಳೆಲ್ಲ । ಹೊಟ್ಟೆಜಾಲಿಯಮುಳ್ಳು
ಹುಟ್ಟಿದವರೆಲ್ಲಬಿಳಿಹಲ್ಲು । ಮೂಡಣ
ಬಟ್ಟೆಯೇಬೇಡ ಸರ್ವಜ್ಞ ॥ ೨ ॥
ಎಲ್ಲೆಲ್ಲಿನೋಡಿದರು । ।ಟೊಳ್ಳುಜಾಲಿಯಮುಳ್ಳು
ಉಳ್ಳವರೆಲ್ಲಕಿಸುವಾಯಿ । ಬಡಗಲಾ
ತಳ್ಳಿಬೇಡೆಂದ ಸರ್ವಜ್ಞ ॥ ೩ ॥
ಜೋಳದಾಬೋನಕ್ಕೆ । ಬೇಳೆಯತೊಗೆಯಾಗಿ
ಕಾಳೆಮ್ಮೆಕರೆವಹಯನಾಗೆ । ಬಡಗಲಿನ
ಮೇಳನೋಡೆಂದ ಸರ್ವಜ್ಞ ॥ ೪ ॥
ನವಣೆಯಾಬೋನಕ್ಕೆ । ಹವಣುಳ್ಳತೊಗೆಯಾಗಿ
ಕವಣೆಗಲ್ಲಷ್ಟುಬೆಣ್ಣೆ । ಯಿದ್ದೂಟ
ಹವಣನೋಡೆಂದ ಸರ್ವಜ್ಞ ॥ ೫ ॥

ಕಣುಕದಾಕಡುಬಾಗಿ । ಮಣಕೆಮ್ಮೆಹಯುಸಾಗಿ
ಕುಣಿಕುಣಿದುಕಡೆವಸತಿಯಾಗೆ। ಬಡಗಲಾ
ಅಣಕನೋಡೆಂದ ಸರ್ವಜ್ಞ ॥ ೬ ॥
ಊರುಸನಿಹದೊಳಿಲ್ಲ । ನೀರೊಂದುಗಾವುದವು
ಸೇರಲೆಂದರೆನೆಳಲಿಲ್ಲ। ಬಡಗಲಾ
ದಾರಿಬೇಡೆಂದ ಸರ್ವಜ್ಞ ॥ ೭ ॥
ಕಡಲೆಯನುಗೋಧಿಯನು । ಮಡಿಕಬ್ಬುಬೆಳೆಯುವರು
ಸುಡಬೇಕುನಾಡನೆಂದವನ । ಬಾಯೊಳಗೆ
ಮಡಿಕಬ್ಬುಬೀಳ್ಗೆ ಸರ್ವಜ್ಞ ॥ ೮ ॥
ಕಾಡೆಲ್ಲ ಕಸುಗಾಯಿ । ನಾಡೆಲ್ಲ ಹೆಗ್ಗಾಡು
ಆಡಿದಮಾತು ನಿಜವಿಲ್ಲ। ಮಲೆನಾಡ
ಕಾಡಿಗಿಕ್ಕೆಂದ ಸರ್ವಜ್ಞ ॥ ೯ ॥
ಅಲ್ಲವರಿಸಿನವುಂಟು । ಬೆಲ್ಲವೇಲಕಿಯುಂಟು
ಒಳ್ಳೆಯಾಹಲಸುಮೆಲಲುಂಟು । ಮಲೆನಾಡ
ನಲ್ಲವೆನಬಹುದೆ? ಸರ್ವಜ್ಞ ॥ ೧೦ ॥
ಕಿಚ್ಚುಂಟು ಕೆಸರುಂಟು । ಬೆಚ್ಚನೆಯ ಮನೆಯುಂಟು
ಇಚ್ಛೆಗೆ ಬರ್ಪ ಸತಿಯುಂಟು । ಮಲೆನಾಡೆ
ಮೆಚ್ಚುನೋಡೆಂದ ಸರ್ವಜ್ಞ ॥ ೧೧ ॥
ಅಂಡೆಯಲಿ ಕರೆಯುವರು । ಕುಂಡದಲಿ ಹೊರುತಿಹರು
ಗಂಡನುಳ್ಳವಳ ಅವಳೆಂಬ । ತಿಗುಳರನು
ಕೆಂಡಕಿಕ್ಕೆಂದ ಸರ್ವಜ್ಞ ॥ ೧೨ ॥
ಅಸುರಸ್ತ್ರೀ ಕಪಿಗೆಮಾ । ನುಷರಾಗಿಹುಟ್ಟಿದರು
ದಶಶಿರನೊಯ್ದು ಹೆಸರಿಟ್ಟ । ತೆಲುಗರಾ
ಹೆಸರೆಲ್ಲರರಿಯೆ ಸರ್ವಜ್ಞ ॥ ೧೩ ॥
ಕಾಲಕೂಟದ ವಿಷವು । ಚೇಳುತುಂಬಿದ ಹಗೆಯು
ಹಾಳೂರ ತುರುಚಿ ನಸುಗುನ್ನಿ। ತಿಗುಳರಾ
ಗಾಳಿಬೇಡೆಂದ ಸರ್ವಜ್ಞ ॥ ೧೪ ॥

ಶಂಖಹುಟ್ಟಿದನಾದ । ಬಿಂಕವನದೇನೆಂಬೆ
ಶಂಕರನ ಪೂಜೆ ಮನೆಮನೆಗೆ । ಮಿಗಿಲಾಸೆ
ತೆಂಕಲುಂಟೆಂದ ಸರ್ವಜ್ಞ ॥ ೧೫ ॥

ರಾಗವೇ ಮೂಡಲೂ । ಯೋಗವೇ ಬಡಗಲೂ
ರೋಗವೇ ಶುದ್ಧ ಪಡುವಲು । ತೆಂಕಲು
ಭೋಗದಬೀಡು ಸರ್ವಜ್ಞ ॥ ೧೬ ॥

ಅಟ್ಟೆಂಬ ಮೂಡಲು । ಸುಟ್ಟೆಂಬ ಬಡಗಲು
ಚಿಟ್ಟಿಯಲ್ಲುಂಬ ಪಡುವಲು । ತೆಂಕಲು
ಮುಷ್ಟಿಲುಂಬುವುದು ಸರ್ವಜ್ಞ ॥ ೧೭ ॥

ಅರೆದಲೆಯು ಮೂಡಲು । ನೆರೆದಲೆಯು ಬಡಗಲು
ಸರಿದಲೆಯು ಉದ್ದಪಡುವಲು । ತೆಂಕಲು
ಬರಿದಲೆಯವರು ಸರ್ವಜ್ಞ ॥ ೧೮ ॥

ಉಡಹೀನಮೂಡಲು । ನುಡಿಹೀನ ಬಡಗಲು
ಕಡುಕೋಪದವರು ಪಡುವಲು । ತೆಂಕಲು
ನುಡಿನಯುದವರು ಸರ್ವಜ್ಞ ॥ ೧೯ ॥

ಶೀತವಾತಗಳುಂಟು । ಬಾತಿಹುದು ಕುಕ್ಷಿಯು
ಪಾತಕರು ಮರೆದು ತಿರಿದುಂಬ । ನಾಡಿಗೆ
ಏತಕ್ಕೆ ಬಹರೊ ? ಸರ್ವಜ್ಞ ॥ ೨೦ ॥

ಅಲ್ಲಬೆಲ್ಲವನೊಲ್ಲೆ । ನೆಲ್ಲಿನೋಗರವೊಲ್ಲೆ
ಯೆಲ್ಲವನೊಲ್ಲೆವೊಸರೊಲ್ಲೆ । ಏಕೊಲ್ಲೆ
ಇಲ್ಲದೆಯೆ ವೊಲ್ಲೆ ಸರ್ವಜ್ಞ ॥ ೨೧ ॥

* * * * ॥ ೨೨—೪೧ ॥

## ೨೦. ಮೂರ್ಖಪದ್ಧತಿ.

ಮೂರ್ಖರಿಗೆ ಬುದ್ಧಿಯನು । ನೂರ್ಕಾಲ ಹೇಳಿದರೆ
ಗೋರ್ಕಲ್ಲಮೇಲೆ ಮಳೆಗರೆಯೆ । ಆಕಲ್ಲು
ನೀರ್ಕೊಂಬುದೇನು? ಸರ್ವಜ್ಞ ॥ ೧ ॥

ಒಂದನೆರಡೆಂಬತಾ । ಹಂದಿಯನು ಮೊಲನೆಂಬ
ಗಂಧಪರಿಮಳವಕೊರಡೆಂಬ । ಮೂರ್ಖತಾ
ನೆಂದುದನೆನ್ನಿ ಸರ್ವಜ್ಞ ॥ ೨ ॥
ಒಲೆಗುಂಡನೊಬ್ಬನೇ । ಮೆಲಬಹುದೆ ಎಂದರೇ
ಮೆಲಬಹುದೆಂಬ ನವಜಾಣ । ಮೂರ್ಖನ
ಗೆಲಲಾಗದ್ಯೆಯು ಸರ್ವಜ್ಞ ॥ ೩ ॥
ಆರುಬೆಟ್ಟವನೊಬ್ಬ । ಹಾರ್‍ಯಾನೆ ಎಂದರೇ
ಧೀರನೀನಹುದುಯೆನಬೇಕು । ಮೂರ್ಖರೊಳು
ಹೋರಾಟಸಲ್ಲ । ಸರ್ವಜ್ಞ ॥ ೪ ॥
ಹೊಳೆಯ ನೀರೊಬ್ಬನೇ । ಅಳೆಯಬಹುದೆಂದರೇ
ಅಳೆಯಬಹುದೆಂದು ಎನಬೇಕು । ಮೂರ್ಖನ
ತಿಳಿಸಲಳವಲ್ಲ ಸರ್ವಜ್ಞ ॥ ೫ ॥
ಅಳಿಹೊಲ್ಲಹಾಡಿಗೇ । ಮಳಿಹೊಲ್ಲಕೋಡಗಕೆ
ಕಳವಳವು ಕೋಪರೊಳು ಹೊಲ್ಲ । ಮೂರ್ಖರಾ
ಕೆಳೆತನವುಹೊಲ್ಲ ಸರ್ವಜ್ಞ ॥ ೬ ॥
ಸಾಲವನುಕೊಂಬಾಗ । ಹಾಲೋಗರುಂಡಂತೆ
ಸಾಲಿಗನು ಬಂದು ಎಳೆವಾಗ । ಕಿಬ್ಬದಿಯ
ಕೀಲುಮುರಿದಂತೆ ಸರ್ವಜ್ಞ ॥ ೭ ॥
ಇತ್ತುದೀಯದವನ । ವೃತ್ಯುವೊಲ್ಲದೆ ಬಿಡದು
ಹತ್ತಿರ್ದ ಲಕ್ಷ್ಮಿತ್ರೊಲಗುವಳು । ಇತ್ತವನ
ತೊತ್ತಿನಮಗನು ಸರ್ವಜ್ಞ ॥ ೮ ॥
ಬೆಂಡುತಾ ಮುಳುಗಿದರು । ಗುಂಡೆದ್ದು ತೇಲಿದರು
ಬಂಡಿಯಾನೊಗವು ಚಿಗುತರೂ । ಸಾಲಿಗನು
ಕೊಂಡದ್ದು ಕೊಡನು ಸರ್ವಜ್ಞ ॥ ೯ ॥
ಕಡಗೊಂಡನಲ್ಲದೇ । ಹಿಡಿಗಳವಕದ್ದಾನೆ?
ತೊಡಕಿದರೆ ಬೈದು ನುಡಿದಾನು । ಸಾಲಿಗನ
ಬಿಡಿಸುವವರಿಲ್ಲ ಸರ್ವಜ್ಞ ॥ ೧೦ ॥

ನಂಬಿಕೆಯುವುಳ್ಳನಕ । ಕೊಂಬುವುದು ಸಾಲವನು
ನಂಬಿಕೆಯು ಕೆಟ್ಟಬಳಿಕ । ಬೆಂದಾವೆ
ಕುಂಭದಂತಿಹನು ಸರ್ವಜ್ಞ ॥ ೧೧ ॥
ಉದ್ದರಿಯ ಕೊಟ್ಟಣ್ಣ । ಹದ್ದಾದಕಾಗ್ಯಾದ
ಎದ್ದೆದ್ದುಬಗುಳ್ವ ನಾಯಾದ । ವೈಲಾರ
ಗೊಗ್ಗಯ್ಯನಾದ ಸರ್ವಜ್ಞ ॥ ೧೨ ॥
ಅಟ್ಟುಂಬಕಾಲಕ್ಕೆ । ಕೊಟ್ಟುಂಬುದೊಬ್ಬರಿಗೆ
ಅಟ್ಟುಂಬುದರಿಯದಧಮರಿಗೆ । ಫಲಪ್ರಾಪ್ತಿ
ಮುಟ್ಟದೇ ಬಕ್ಕು ಸರ್ವಜ್ಞ ॥ ೧೩ ॥
ಇಲ್ಲವೆಂದರೆ ಆತ । ಬಲ್ಲಠಾವಿಗೆ ಹೋಹ
ಇಲ್ಲೆನ್ನಲೊಲ್ಲ ಕೊಡಲೊಲ್ಲ । ದಾ ಪಾಪಿ
ಕೊಲ್ಲದೇ ಕೊಂದ ಸರ್ವಜ್ಞ ॥ ೧೪ ॥
ಆಡದೇ ಮಾಡುವನು । ರೂಢಿಯೊಳಗುತ್ತಮನು
ಆಡಿಮಾಡುವವ ಮಧ್ಯಮನು । ಅಧಮತಾ
ನಾಡಿಮಾಡದವ ಸರ್ವಜ್ಞ ॥ ೧೫ ॥
ಬೇಡದೆಯೆಕೊಡುವಾತ । ರೂಢಿಯೊಳಗುತ್ತಮನು
ಬೇಡಿದರೆಕೊಡುವಮಧ್ಯಮನು । ಅಧಮತಾ
ಬೇಡಿದರೆಕೊಡನು ಸರ್ವಜ್ಞ ॥ ೧೬ ॥
ಇಚ್ಛೆಯರಿದಿತ್ತರೆ । ನುಚ್ಚಂಬಲಿಮಾಣಿಕವು
ಇಚ್ಛೆತೀರಿದಬಳಿಕಇತ್ತರಾ । ಮಾಣಿಕವು
ನುಚ್ಚಿಗಿಂ ಕಡೆಯು ಸರ್ವಜ್ಞ ॥ ೧೭ ॥
ಆಸೆಯರಿದಿತ್ತರೆ । ವೀಸವೆ ಸವಾಲಕ್ಷ
ಆಸೆತೀರಿದಬಳಿಕಇತ್ತರೆ । ಸವಲಕ್ಷ
ವೀಸಕಿಂಕಡೆಯು ಸರ್ವಜ್ಞ ॥ ೧೮ ॥
ಇಲ್ಲದಕಾಲಕ್ಕೆ । ಹೊಲ್ಲೆಹವುಜನರಿಗೆ
ಅಲ್ಲದಗುಣದಅರಸನ । ಸಾಲಕ್ಕೆ
ಕಲ್ಲಾಗಬೇಕು ಸರ್ವಜ್ಞ ॥ ೧೯ ॥

ಬೇರವನುಕೊಟ್ಟಣ್ಣ। ಹೋರ್ರ್‍ಯಾನುಚೀರ್ರ್‍ಯಾನು
ವಿಾರಿದರೆಕಲ್ಲಹೊರಿಸಾನು। ಸುಮ್ಮನೆ
ಗೀರಿಕೊಂಡಾನೆ? ಸರ್ವಜ್ಞ ॥ ೨೦ ॥
ಅಕ್ಕಸಾಲೆಯ ನೂರಿ। ಗೊಕ್ಕಲೆಂದೆನಬೇಡ
ಬೆಕ್ಕುಬಂದಿಲಿಯ ಹಿಡಿದಂತೆ। ಊರಿಗೆ
ರಕ್ಕಸನಹನು ಸರ್ವಜ್ಞ ॥ ೨೧ ॥
ಹಣವಿಂಗೆ ವೀಸವಿ। ಪ್ಪಣಕೊಂದು ಬೇಳೆಯನು
ತ್ರಿಣಯನನು ಎದುರಾಗಿ ಇರಲು। ಅಗಸಾಲೆ
ಟೊಣೆಯದೆ ಬಿಡನು ಸರ್ವಜ್ಞ ॥ ೨೨ ॥
ಕಡೆಕಾಸಿ ಮಿಂಚಿಕ್ಕಿ। ಕಡಿಮಾಡಿಕತ್ತರಿಸಿ
ಪೊಡೆವೆಡೆಯೊಳಗೆ ಸಿಡಿಸುವ। ಅಪ್ಪಳಿಸಿ
ಬಡಿವ ಪ್ರತಿವೆರಸಿ ಸರ್ವಜ್ಞ ॥ ೨೩ ॥
ನೆವದೊಳೆವೆಯಾಡಿಸುತ। ಅವಸರವನಡಿಸುತ್ತ
ಕವಿದಿರಲು ಕಡಿದು ಪ್ರತಿವೆರಸಿ। ಚಿನ್ನವನು
ಸವೆಸದೇಬಿಡನು ಸರ್ವಜ್ಞ ॥ ೨೪ ॥
ವಂಚಕರವನಿತೆಯರ। ಪಿಂಛಕರಹೊಗಿಸುತ್ತ
ಅಂಚಿತವನೊದರಿಕಳುಹಿದರೆ। ಅಕ್ಕಸಾಲೆ
ವಂಚಿಸಲರಿಯ ಸರ್ವಜ್ಞ ॥ ೨೫ ॥
ರಸವಂಗಡಿಯೊಳುಂಟು। ಕಿಸ(?)ವುಂಟುಸಾಲೆಯಲಿ
ವಸವಟ್ಟನೆಂಬಗಿಡವುಂಟು।ವಾದಿಗಳು
ಹಸಿದೇತಕಿಹರು ? ಸರ್ವಜ್ಞ ॥ ೨೬ ॥
ಶಶಕನಾಕಿವಿಯಂತೆ। ಯೆಸಗಿಪ್ಪದಾಪತ್ರ
ಋಷಿಯರಾಕುಂಭದಂತಿರ್ಪು। ದೊಡಗೂಡೆ
ಹುಸಿಯಲ್ಲಕನಕ ಸರ್ವಜ್ಞ ॥ ೨೭ ॥
ಇಂಗಳದ ತೈಲವನು। ಹಿಂಗದಲೆತೆಗೆದರೆ
ಸಂಗಾತಿಗುಂಟುಸತಿಗುಂಟು। ಮಿಕ್ಕದ್ದು
ಭಂಗಾರಕುಂಟು ಸರ್ವಜ್ಞ ॥ ೨೮ ॥

ತಾಳಕದಸತ್ವವನು । ಮೇಳೈಸು ರಸದೊಡನೆ
ಬಾಳುವಾಶುಲ್ಬವೊಡಗೂಡು । ತಾರೆತಾ
ಹೇಳಿದಂತಹುದು ಸರ್ವಜ್ಞ ॥ ೨೯ ॥

ಗಂಧಕದತೈಲವನು । ಕುಂದದೇರಸಕಿತ್ತು
ಕಂದಿಸಿದತಾರೆಯೊಳುಕೂಡೆ । ಹೇಮತಾ
ಮುಂದೆಬಂದಕ್ಕು ಸರ್ವಜ್ಞ ॥ ೩೦ ॥

ತುತ್ತುನಾಗವುನಾಗ । ಮತ್ತೆನಾಗವುನಾಗ
ಉತ್ತಮದನಾಗದೊಡಗೂಡೆ । ಅದುಮುಂದೆ
ಸತ್ಯವುಹೇಮ ಸರ್ವಜ್ಞ ॥ ೩೧ ॥

ಹೆಮ್ಮಿಟಲಿಹೇರಿಕ್ಕೆ । ಉಮ್ಮಗೇರಸದಾಳಿ
ಒಮ್ಮನಳಿಯಃದಲುದಕವು । ಕಾಯದಲಿ
ಕೆಮ್ಮೆಲ್ಲಕೆಡುಗು ಸರ್ವಜ್ಞ ॥ ೩೨ ॥

ಉತ್ತರಣೆಉಪ್ಪಲಿಕೆ । ಮತ್ತೆಶಿಂಶುಮಾರಿ
ಕತ್ತೆಯಮೂತ್ರವೆರಸಿದರೆ । ರಸಭಸ್ಮ
ಉತ್ತಮವಕ್ಕು ಸರ್ವಜ್ಞ ॥ ೩೩ ॥

ಹುಸಿವುದಕ್ಕಿಂತನೂ । ಪಶುವಕೊಲ್ವುದುಲೇಸು
ಶಿಶುಹತ್ಯಮಾಡಿದೊಡೆಲೇಸು । ಮರೆಯಲ್ಲಿ
ದೇಶಾಂತ್ರಲೇಸು ಸರ್ವಜ್ಞ ॥ ೩೪ ॥

ನೋಡೆ ಈ ಧರೆಯಲ್ಲಿ । ಬೇಡುವುದುಕಡುಕಷ್ಟ ।
ಬೇಡಿದಡೆಈಯದವಕಷ್ಟ । ಮಾಡುವರ
ಬೇಡೆನಲುಕಷ್ಟ ಸರ್ವಜ್ಞ ॥ ೩೫ ॥

ಕೊಟ್ಟದ್ದುತನಗಿಲ್ಲ । ಮುಟ್ಟಿದರೆವುಳಿವಿಲ್ಲ
ಕೆಟ್ಟವಿಷಯದೊಳುಸಿಲ್ಕಿದರೆ । ಆನರಗೆ
ಕೆಟ್ಟೀತುತಪವು ಸರ್ವಜ್ಞ ॥ ೩೬ ॥

ಕಂಡುಕೊಟ್ಟುದುಇಲ್ಲ । ದಂಡನೆಯುತನಗಿಲ್ಲ
ಖಂಡಿತದಪುಣ್ಯಮೊದಲಿಲ್ಲ । ಸ್ವರ್ಗವನು
ರಂಡೆಯಾಳುವಳೆ ? ಸರ್ವಜ್ಞ ॥ ೩೭ ॥

ಹಲ್ಲುಯೆಲುಬೆಂಬುದನು । ಎಲ್ಲರೂಬಲ್ಲರು
ಅಲ್ಲಲ್ಲಿಅಗಿತಿಂದಬಳಿಕ । ನೋಡುವರೆ
ಎಲ್ಲಿಯಶೀಲ? ಸರ್ವಜ್ಞ ॥ ೩೮ ॥
ತುಂಬೆಯಾಸೊಪ್ಪಿಗೆ । ಇಂಗೇಕೆಮೆಣಸೇಕೆ ?
ಶೃಂಗಾರವೇಕೆ ? ಬಡವಂಗೆ । ಸೂಳೆಗೆ
ನಂಬುಗೆಯೇಕೆ ? ಸರ್ವಜ್ಞ ॥ ೩೯ ॥
* * * * ॥ ೪೦ ॥

## ೨೧. ಜೋತಿಷ್ಯಪದ್ಧತಿ.

ರಂಧ್ರಗತಿಯಾದಿತ್ಯ| ರೊಂದಾಗಿಯರ್ಧಿಸುತ
ಅಂದಿನತಿಥಿಯನೊಡಗೂಡೆ । ನಕ್ಷತ್ರ
ಮುಂದೆಬಂದಹುದು ಸರ್ವಜ್ಞ ॥ ೧ ॥
ಗತವಾದಮಾಸವನು । ಗತಿಯಿಂದದ್ವಿಗುಣಿಸುತ
ಪ್ರತಿಪದದತಿಥಿಯನೊಡಗೂಡೆ । ಕರಣತಾ
ನತಿಶಯದಿಬರ್ಕು ಸರ್ವಜ್ಞ ॥ ೨ ॥
ಸಂದಿರ್ದಮಾಸವನು । ಕುಂದದಿಮ್ಮಡಿಮಾಡಿ
ಅಂದಿನತಿಥಿಯನೊಡಗೂಡೆ । ತಾರೆತಾ
ಮುಂದೆ ಬಂದಪುದು ಸರ್ವಜ್ಞ ॥ ೩ ॥
ಪಂಚತಾರೆಯು ಮುನಿಯ । ಲಾಂಛನವು ಸೋತರೆ
ಕಂಚಿಯಿಂದತ್ತ ಮಳೆಯಿಲ್ಲ । ಬತ್ತವನು
ಸಂಚಿಸುವುದೊಳಿತು ಸರ್ವಜ್ಞ ॥ ೪ ॥
ತಾರೆಸಪ್ತಮಿಯದಿನ । ತಾರೆಸಮರಾಜಂಗೆ
ಹೋರದಲೆ ಹೋರದಲ್ಲಿರಲು (?) ಜಗಕೆಹೆ
ಮ್ಮಾರಿಕಾಣಯ್ಯ ಸರ್ವಜ್ಞ ॥ ೫ ॥
ಹಗೆಯಹುಣ್ಣಿಮೆಹೋದ । ಮಿಗೆಮೂರುದಿವಸಕ್ಕೆ
ಮೃಗಧರನಕೂಡೆಮಘೆಯಿರಲು । ಮಳೆಗಾಲ
ಜಗವದಣಿಸುವುದು ಸರ್ವಜ್ಞ ॥ ೬ ॥

ಆದಿಯಾವಾಸವನು । ವೇದದಿಂದಲಿಗುಣಿಸಿ
ಆದಿನದತಿಥಿಯನೊಡಗೂಡೆ । ಯೋಗವು
ಆದಿಯಲಿಬಕ್ಕು ಸರ್ವಜ್ಞ ॥ ೭ ॥
ನಂದೆಯನುಭದ್ರೆಯನು । ಪೊಂದಾಗಿಯರ್ಥಿಸುತ
ಅಂದಿನತಿಥಿಗೆಸರಿಯಾಗೆ । ಗ್ರಹಣತಾ
ಮುಂದೆಬಂದಪುದು ಸರ್ವಜ್ಞ ॥ ೮ ॥
ಅಡಿಯನಿಮ್ಮಡಿಮಾಡಿ । ಒಡಗೂಡಿಹನ್ನೊಂದ
ತಡೆಯದಿನ್ನೂರಹತ್ತರಲಿ । ಭಾಗಿಸಲು
ಪಡೆದದ್ದೆ ಗಳಿಗೆ ಸರ್ವಜ್ಞ ॥ ೯ ॥
ಚಂದ್ರಮಾರ್ತಾಂಡರು । ಸಂಧಿಸಲುಪರಿವೇಷ
ಕುಂದದೇನಿಚ್ಚಬರುತಿರಲು । ಜಗವೆಲ್ಲ
ಕಂದಿದಂತಿಹುದು ಸರ್ವಜ್ಞ ॥ ೧೦ ॥
ಹೊತ್ತಾರೆನೆರೆಯುವುದು । ಹೊತ್ತೇರೆಪರಿಯುವುದು
ಕತ್ತಲೆಯಲಳಿವಮುಗಿಲಾಗೆ । ಮಳೆಗಾಲ
ವೆತ್ತಣದಯ್ಯ? ಸರ್ವಜ್ಞ ॥ ೧೧ ॥
ವಾಯುವಾಯುವಕೂಡೆ । ವಾಯುಹೆಮ್ಮಳೆಯಕ್ಕು
ವಾಯುನೈರುತ್ಯನೊಡಗೂಡೆ । ಮಳೆತಾನು
ವಾಯುವೇಅಕ್ಕು ಸರ್ವಜ್ಞ ॥ ೧೨ ॥
ಅಳಿವಣ್ಣದಾಕಾಶ । ಗಿಳಿವಣ್ಣದಾಮುಗಿಲು
ಅಳಿದಳೆದುಅರ್ಕನುದಯಿಸಲು । ಮಳೆತಾನು
ಘಳಿಲನೇಬರ್ಕು ಸರ್ವಜ್ಞ ॥ ೧೩ ॥
ಅಡರಿಪೂರ್ವದಮಿಂಚು । ಪಡುವಲಲಿಧನುವೇಳೆ
ಬಡಗಣಾಗಾಳಿನಡೆಯಲು । ಮಳೆತಾನು
ತಡೆಯದೇಬರ್ಕು ಸರ್ವಜ್ಞ ॥ ೧೪ ॥
ಮರೆದೊಮ್ಮೆನಡೆವುತ್ತ । ಸರಕನೇಸೀತರೆ
ಅರಿದರೆಚ್ಚೆತ್ತುನಿಲ್ಲುವುದು । ನಿಲ್ಲದಿರೆ
ಇರಿದುಕೊಂಡಂತೆ ಸರ್ವಜ್ಞ ॥ ೧೫ ॥

ಕಟ್ಟಿದರೆಸೀತರೇ । ನೆಟ್ಟನೆಯೆನಿಲಬೇಕು
ಒಟ್ಟೈಸಿವಿಾರಿನಡೆದರೆ । ಗುರಿಯೊಡ್ಡಿ
ತಟ್ಟನೆಸೆದಂತೆ ಸರ್ವಜ್ಞ ॥ ೧೬ ॥

ಏನುಮನ್ನಿಸದಿರಲು । ಸೀನುಮನ್ನಿಸಬೇಕು
ಸೀನುಮನ್ನಿಸದೆಹೋದರೆ । ಆತಂಗೆ
ಮಾನವೇಹಾನಿ ಸರ್ವಜ್ಞ ॥ ೧೭ ॥

ಎಡನುಬಲನೆನಬೇಡ । ಒಡನೆಬಹೆನೆನಬೇಡ
ಕಡುದೂರಸಾರೆನೆನಬೇಡ । ಸೀತರೇ
ಅಡಿಯನಿಡಬೇಡ ಸರ್ವಜ್ಞ ॥ ೧೮ ॥

ತಾನಕ್ಕೆಪರರಕ್ಕೆ । ಶ್ವಾನಗಾರ್ದಭವಕ್ಕೆ
ತಾನುಪಯಣವನುಪೋಪಲ್ಲಿ । ಪಶುವಕ್ಕೆ
ಸೀನೆಭಯವಕ್ಕು ಸರ್ವಜ್ಞ ॥ ೧೯ ॥

ಒಮ್ಮೆಸೀತರೆಹೊಲ್ಲ । ಇಮ್ಮೆಸೀತರೆಲೇಸು
ಕೆಮ್ಮಿಕೇಕರಿಸಿಉಗುಳಿದರೆ । ಆಲೇಸು
ಬ್ರಹ್ಮಂಗವಿಲ್ಲ ಸರ್ವಜ್ಞ ॥ ೨೦ ॥

ಒಕ್ಕಗೆ ಬಲನಾದ । ಡೊಕ್ಕದ್ದುಕರಲೇಸು
ಒಕ್ಕನಾಮೇಲೆ ಪೊಕ್ಕಂಗೆ । ನಾಯಿನರ
ನೆಕ್ಕಿದಂತಕ್ಕು ಸರ್ವಜ್ಞ ॥ ೨೧ ॥

ಹಿಡಿಯುವುದುಹೆಬ್ಬಾವು । ಪಡೆಯುವುದುಪಡಿಬತ್ತ
ತುಡುಕಿನೋಡುವುದುಪರಬ್ರಹ್ಮ । ಜೋಯಿಸಗೆ
ಕೊಡುವುದೊಂದಡಕೆ ಸರ್ವಜ್ಞ ॥ ೨೨ ॥

ಹಸಿದರೇಉಣಲಿಲ್ಲ । ಒಸೆದೇಳೆಹೊತ್ತಿಲ್ಲ
ಬೆಸಗೊಂಬುದಕ್ಕೆಕಡೆಯಿಲ್ಲ । ಜೋಯಿಸದ
ಗಸಣಿಯೇಬೇಡ ಸರ್ವಜ್ಞ ॥ ೨೩ ॥

ಕುರಿಯನೇರಲುಗುರುವು । ಧರೆಗೆಹೆಮ್ಮಳೆಯಕ್ಕು
ಪರಿಪರಿಯಧಾನ್ಯಬೆಳೆಯಕ್ಕು । ಪ್ರಜೆಗಳ್ಗೆ
ಕರೆವಹಯನಕ್ಕು ಸರ್ವಜ್ಞ ॥ ೨೪ ॥

ವೃಷಭವೇರಲುಗುರುವು । ವಸುಧೆಯೊಳುಮಳೆಯಕ್ಕು
ಶಿಶುಪಶುಸ್ತ್ರೀಗೆಜಯವಕ್ಕು । ಜನರೆಲ್ಲ
ಮಿಸುನಿಯುಂತಕ್ಕು ಸರ್ವಜ್ಞ ॥ ೨೫ ॥

ಮಿಥುನಕ್ಕೆಗುರುಬರಲು । ಮಥನಲೋಕದೊಳಕ್ಕು
ಪೃಥಿವಿಯೊಳಗೆಲ್ಲಕೆಡುಕಕ್ಕು । ನರರುಗಳು
ಹತವಾಗಲಕ್ಕು ಸರ್ವಜ್ಞ ॥ ೨೬ ॥

ಏಡಿಯೇರಲುಗುರುವು । ನೋಡೆಕಡೆಮಳೆಯಕ್ಕು
ನಾಡೊಳಗೆಲ್ಲಬೆಳೆಯಕ್ಕು । ಪ್ರಜೆಗಳು
ಈಡೇರಲಕ್ಕು ಸರ್ವಜ್ಞ ॥ ೨೭ ॥

ಸಿಂಗಕ್ಕೆಗುರುಬರಲು । ಸಂಗರವುಘನವಕ್ಕು
ಅಂಗನಾಬಾಧೆಪಿರಿದಕ್ಕು । ಕಡೆಯುಮಳೆ
ಹಿಂಗಾರುಮಕ್ಕು ಸರ್ವಜ್ಞ ॥ ೨೮ ॥

ಕನ್ನೆಗೇಗುರುಬರಲು । ಚೆನ್ನಾಗಿಮಳೆಯಕ್ಕು
ಹೊನ್ನಾಗಿಪಶುವಹಯನಕ್ಕು । ಮಂಡನದ
ಕನ್ನೆಯರುಮಕ್ಕು ಸರ್ವಜ್ಞ ॥ ೨೯ ॥

ತುಲೆಯನೇರಲು ಗುರುವು । ನೆಲೆಯಾಗಿ ಮಳೆಯಕ್ಕು
ಪಲವು ಧಾನ್ಯಗಳು ಬೆಳೆಯಕ್ಕು । ಪ್ರಜೆಗಳಿಗೆ
ನಿಲೆಕಾಲಮಕ್ಕು ಸರ್ವಜ್ಞ ॥ ೩೦ ॥

ಚೇಳನೇರಲು ಗುರುವು । ಕಾಳಗವು ಹಿರಿದಕ್ಕು
ಗಾಳಿಯಿಂ ಮಳೆಯು ಕಿರಿದಕ್ಕು । ಬೆಳೆಯೆಲ್ಲ
ಕೋಳಾಗಲಕ್ಕು ಸರ್ವಜ್ಞ ॥ ೩೧ ॥

ಬಿಲ್ಲನೇರಲು ಗುರುವು । ತಲ್ಲಣವು ಜಗಕೆಲ್ಲ
ಕಲ್ಲಮೇಲೆಲ್ಲ ಬೆಳೆಯಕ್ಕು । ನೃಪರಿಗೆ
ತಲ್ಲಣವಕ್ಕು ಸರ್ವಜ್ಞ ॥ ೩೨ ॥

ಮಕರಕ್ಕೆ ಗುರುಬರಲು । ಮಕರತೋರಣವಕ್ಕು
ಸಕಲಧಾನ್ಯಗಳು ಬೆಳೆಯಕ್ಕು । ಪ್ರಜೆಗಳು
ಸುಖವಿರಲಕ್ಕು ಸರ್ವಜ್ಞ ॥ ೩೩ ॥

ಕುಂಭಕ್ಕೆ ಗುರುಬರಲು । ತುಂಬುವುವು ಕೆರೆಬಾವಿ
ಅಂಬಾರವೆಲ್ಲ ಬೆಳೆಯಕ್ಕು । ಲೋಕಕ್ಕೆ
ಸಂಭ್ರಮವಕ್ಕು ಸರ್ವಜ್ಞ ॥ ೩೪ ॥
ಮೀನಕ್ಕೆ ಗುರುಬರಲು । ಮಾನಖಂಡುಗವಕ್ಕು
ಕಾನನವೆಲ್ಲ ಬೆಳೆಯಕ್ಕು । ಪ್ರಜೆಗಳಿಗೆ
ಆನಂದವಕ್ಕು ಸರ್ವಜ್ಞ ॥ ೩೫ ॥
ಮೀನಕ್ಕೆ ಶನಿಬರಲು । ಆನೆಕಾಳಗಮಕ್ಕು
ಹಾನಿತಾನಕ್ಕು ಬರನಕ್ಕು । ಲೋಕಕ್ಕೆ
ಹೀನತೆಯುಬರ್ಕು । ಸರ್ವಜ್ಞ ॥ ೩೬ ॥
ಮೃಗಶಿರಾದಿಯಾದ । ಭಗಣದಲಿರವಿಯಿರಲು
ಮಗೆಯ ಪಕ್ಷದಲಿಶಶಿತೊಲಗೆ । ಮಳೆಗಾಲ
ಜಗದಣಿಯಲಕ್ಕು ಸರ್ವಜ್ಞ ॥ ೩೭ ॥
ತೆಂಕಲಿಗೆ ಮುಗಿಲಿಡಿದು । ಶಂಕರನದೆಸೆಮಿಂಚೆ
ಪಂಕಜಾರಾತಿಗುಡಿಗಟ್ಟೆ । ಮಳೆಯುತಾ
ಭೋಂಕನೆಬಕ್ಕು ಸರ್ವಜ್ಞ ॥ ೩೮ ॥
ತಳಿಗೆಗೇ ತಲೆಯಿಲ್ಲ । ಮಳೆಗೆ ಜೋಯಿಸರಿಲ್ಲ
ಬೆಳಗಾಗೆ ಕನ್ನಗಳವಿಲ್ಲ । ಲೋಕದೊಳು
ಪುಳಿದಾಳ್ಗಳಿಲ್ಲ ಸರ್ವಜ್ಞ ॥ ೩೯ ॥
ಮುಗ್ಗಿಯನು ಗುಣಿಸುವರೆ । ವರ್ಗದ ಜೋಯಿಸನು
ಎಗ್ಗನು ಮಳೆಯನರಿಯನು । ದೇವರಾ
ಹೆಗ್ಗಡೆಯೆಬಲ್ಲ ಸರ್ವಜ್ಞ ॥ ೪೦ ॥

## ೨೨. ಬ್ರಾಹ್ಮಣ ಪದ್ಧತಿ.

ಸಂಜೆಯಾ ವಂದನೆಯ । ಅಂಜದೇಒಸೆದೊಸೆದು
ಸಂಜೆಯಂಜಿಕೆಯನೊಡಗೂಡೆ । ಸಂಜೆಯು
ನಂಜಿನಂತಕ್ಕು ಸರ್ವಜ್ಞ ॥ ೧ ॥

ಕಾಲದಲಿ ಕಾಲದಲಿ । ಏಳೆಂಟುಮಾಡುವುದು
ಕಾಲತಪ್ಪಿದವೇಳೆನೂರೆಂಟು । ಮಾಡುವುದು
ಕಾಳುಕಾಣಯ್ಯ ಸರ್ವಜ್ಞ ॥ ೨ ॥
ದಾರವಿದ್ದರೆ ಮುತ್ತು । ಹಾರವೆಂದೆನಿಸುವುದು
ಆರೈದುನಡೆವ ದ್ವಿಜರುಗಳ । ಸಂಸಾರ
ದಾರದಿಂದಧಿಕ ಸರ್ವಜ್ಞ ॥ ೩ ॥
ಬೇಡಂಗೆಕೊಡೆಹೊಲ್ಲ । ಆಡಿಂಗೆ ಮೆಳೆಹೊಲ್ಲ
ಬೇಡಿಕೊಂಬಂಗೆ ಬರ ಹೊಲ್ಲ । ದ್ವಿಜನಿಗೆ
ನಾಡನುಡಿಹೊಲ್ಲ ಸರ್ವಜ್ಞ ॥ ೪ ॥
ಪಕ್ಷಕೊಂದುಪವಾಸ । ಪುಕ್ಕಟೆಯಶ್ರೀತುಲಸಿ
ರಕ್ಕಸರವೈರಿ ಹರಿನಾಮ । ಯಮನಿಗೆ
ಸಿಕ್ಕಲೇಕೆಂದ ಸರ್ವಜ್ಞ ॥ ೫ ॥
ತೋರಿದಾದ್ವಾದಶಿಯ । ಮಾರಿಮಾಡುವ ಫಲವು
ಸಾರಿದ ಪುರುಷಕಿರಿದೆಂದು । ಪರರನ್ನು
ಸಾರುವವಳಂತೆ ಸರ್ವಜ್ಞ ॥ ೬ ॥
ತೊರೆಯುಬಲ್ಲರ ಧರ್ಮ । ವರದೆಯಾನದಿಯಂತೆ
ತೊರೆಯುದೇ ತೊಯ್ದು ಪರಿಯದೆ । ತೊರೆಬತ್ತಿ
ದೊರತೆ ಕಾಣಯ್ಯ ಸರ್ವಜ್ಞ ॥ ೭ ॥
ಮಾಪರೇಪೋಪರೇ । ಪಾಪವೆನ್ನದು ಕೆರೆಯು
ಮಾಪರೇ ವೈಯೊರೆಯುಪೊಕ್ಕು । ಆ ಪಾಪ
ಲೇಪದಂತಕ್ಕು ಸರ್ವಜ್ಞ ॥ ೮ ॥
ಮುನ್ನಮಾಡಿದ ಪಾಪ । ಹೊನ್ನಿಂದಹೋಹುದೇ?
ಹೊನ್ನಿನಾಪುಣ್ಯವದು ಬೇರೆ । ಪಾಪತಾ
ಮುನ್ನಿನಂತಿಹುದು ಸರ್ವಜ್ಞ ॥ ೯ ॥
ಹಿರಿದು ಕರ್ಮವಮಾಡಿ । ಹರಿವಗಂಗೆಯ ಮಿಂದು
ಹರಿಯಿತುಪಾಪವೆನಬೇಡ । ಆಪಾಪ
ಎರೆಯುಮಣ್ಣಲ್ಲ ಸರ್ವಜ್ಞ ॥ ೧೦ ॥

ಪಾಪಹೋಯಿತು ಯೆಂದು । ಸೋಪಾನಗಳನಿಳಿದು
ಪಾಪವನು ಕಳೆದೆನೆನಬೇಡ । ಆಪಾಪ
ಲೇಪದಂತಿಹುದು ಸರ್ವಜ್ಞ ॥ ೧೧ ॥
ಗಾಯತ್ರಿವೇದಕ್ಕೆ । ತಾಯಿಯೆಂದೆನಿಸಿತ್ತು
ವಾಯಕ್ಕೆದ್ವಿಜರು ಹಲವು । ಕೊಂಬಿಂಗೆ
ಹಾಯುತಿಹರೇಕೊ? ಸರ್ವಜ್ಞ ॥ ೧೨ ॥
ಮಟ್ಟಿಯನು ಮಣ್ಣನ್ನು । ಇಟ್ಟುತಾನೊಸಲೊಳಗೆ
ನೆಟ್ಟನೇಸ್ವರ್ಗಪಡೆಯುವರೇ । ಸಾಣೆಕಲ್
ಕೆಟ್ಟಕೇಡೇನು? ಸರ್ವಜ್ಞ ॥ ೧೩ ॥
ನೀರುಮುಳುಗಿದ ನಿಟ್ಟ । ಹಾರುವನೆ? ಸ್ವರ್ಗಕ್ಕೆ
ಓರಂತೆ ನೀರು ಮುಳುಗಿರ್ದಾ । ಕಪ್ಪೆಗಿಂ
ನಾರು ಸರಿಯುಹರು? ಸರ್ವಜ್ಞ ॥ ೧೪ ॥
ಮೂರೆಳೆಯಹಾಕಿದವ । ಹಾರುವೊಡೆ ಸ್ವರ್ಗಕ್ಕೆ
ನೂರೆಂಟು ಯೆಳೆಯ ಕೌದಿಯನು । ಹೊಲಿದವನು
ಹಾರನೇಕೆಂದ ಸರ್ವಜ್ಞ ॥ ೧೫ ॥
ಎಂಜಲೆಂಜಲು ಯೆನುತ । ಅಂಜುವರು ವಿಪ್ರರು
ಎಂಜಲಿಂದಾದ ತನುವಿರಲು । ಅದಕಂಡು
ಅಂಜರೇಕೆಂದ ಸರ್ವಜ್ಞ ॥ ೧೬ ॥
ಉತ್ತಮರು ಎಂಬುವರು । ಸತ್ಯದಿಂ ಬಾಳುವರು
ಉತ್ತಮರನೇನನೆನಬೇಡ । ಜಗಕೆಲ್ಲ
ಮುತ್ತಿನಂತವರು ಸರ್ವಜ್ಞ ॥ ೧೭ ॥
ಬೆಂದಮನೆಬಾಗಿಲಿನ । ಮುಂದೆ ತೋರಣವೇಕೆ?
ಕುಂದುಕುಲದವಳ ಕೂಡುಂಡ । ಬ್ರಾಹ್ಮಣಗೆ
ಮಿಂದೂಟವೇಕೆ? ಸರ್ವಜ್ಞ ॥ ೧೮ ॥
ಮಿಂದುಂಬ ಬ್ರಾಹ್ಮಣಗೆ । ಬಂಧಸೂತ್ರಗಳೇಕೆ?
ಮಿಂದುವೈಲಿಗೆಯನುಡಲೇಕೆ? ಜಳಕದ
ಸಂದೇಹವೇಕೆ? ಸರ್ವಜ್ಞ ॥ ೧೯ ॥

ನಡೆವುದೊಂದೇ ಭೂಮಿ । ಕುಡಿವುದೊಂದೇ ನೀರು
ಸುಡುವರೇ ಕಿಚ್ಚುಯೆರಡಿಲ್ಲ । ಲೋಕದಾ
ಒಡನುಣ್ಣರೇಕೆ? ಸರ್ವಜ್ಞ ॥ ೨೦ ॥

ನಿತ್ಯನೀರಲಿ ಮುಳುಗಿ । ಹತ್ತುವನೆ? ಸ್ವರ್ಗಕ್ಕೆ
ಹತ್ತೆಂಟುಕಾಲ ಜಲದೊಳಗೆ । ಇಹ ಕಪ್ಪೆ
ಹತ್ತದೇಕೆಂದ ಸರ್ವಜ್ಞ ॥ ೨೧ ॥

ಮುಟ್ಟಾದ ಹೆಂಗಸನು । ಮುಟ್ಟಲೊಲ್ಲನು ನೋಡೆ
ಮುಟ್ಟತಾತಡೆದು ತನುವಾದ । ದೇಹವನು
ಮುಟ್ಟುವನೇಕೊ? ಸರ್ವಜ್ಞ ॥ ೨೨ ॥

ಮುಟ್ಟಾದ ಹೊಲೆಯೊಳಗೆ ಹುಟ್ಟುವುದು ಜಗವೆಲ್ಲ
ಮುಟ್ಟಬೇಡೆಂದು ತೊಲಗುವ । ಹಾರುವನು
ಹುಟ್ಟಿದನೆಲ್ಲಿ? ಸರ್ವಜ್ಞ ॥ ೨೩ ॥

ಹಾರುವರು ಸ್ವರ್ಗದಾ । ದಾರಿಯನು ಬಲ್ಲರೇ?
ನಾರಿ ಪತಿಹಿತದಿನಡೆದರೆ । ಸ್ವರ್ಗದ
ದಾರಿತೋರುವುದು ಸರ್ವಜ್ಞ ॥ ೨೪ ॥

ಎಳ್ಳನ್ನು ಮುಳ್ಳನ್ನು । ಕುಳ್ಳಿತ್ತುಸುಟ್ಟಾತ
ನಿಲ್ಲದೆ ಸ್ವರ್ಗ ಪಡೆಯುವರೆ । ಊರನು ಸುಟ್ಟ
ಕಳ್ಳನೇ ಕುಳಿದ? ಸರ್ವಜ್ಞ ॥ ೨೫ ॥

ಹೊಲೆಗೇರಿಯುಲಿ ಹುಟ್ಟಿ । ಎಲುವಿನಾ ಮನೆಮಾಡಿ
ಸಲೆಕರ್ಮದಾನಿಯೆನಿಸಿದ । ಮನುಜರು
ಕುಲಕೆ ಹಾರುವರು ಸರ್ವಜ್ಞ ॥ ೨೬ ॥

ಮಾದಿಗನುಕಮ್ಮಿಯೂ । ಭೇದವಿಲ್ಲವುಬಂದೆ
ಮಾದಿಗೊಂಡೆಡೆಯಲಪಕಾರಿ । ಕಮ್ಮಿತನ
ಗಾದವರಕೊಲ್ವ ಸರ್ವಜ್ಞ ॥ ೨೭ ॥

ಸಕ್ಕರೆಯಪೊಳಗಾಗಿ । ಯಿಕ್ಕಿದಾನೀರನ್ನು
ಚೊಕ್ಕಟವೆನುತಕುಡಿಯುವರು । ಹೊಲೆಯರು
ಚಿಕ್ಕವರಂತೆ ಸರ್ವಜ್ಞ ॥ ೨೮ ॥

ಹೊಲೆಯುವಾದಿಗರುಂಡು। ಸಲೆಬಿಟ್ಟತೊಗಲೊಳು
ಕುಲಜರೆಂಬರಿಗೆ ಉಣಲಾಯ್ತು। ಹೊಲೆಯುನ
ಕುಲವಾವುದೆಂದ ಸರ್ವಜ್ಞ ॥ ೨೯ ॥
ಸತ್ತಾಡತಿಂಬಾತ। ನೆತ್ತಣಾಹೊಲೆಯುನು?
ಒತ್ತಿಜೀವವನು ಕೊರೆಕೊರೆದು। ತಿಂಬಾತ
ನುತ್ತಮದಹೊಲೆಯ ಸರ್ವಜ್ಞ ॥ ೩೦ ॥
ಕೊಂದುತಿನ್ನುವಭಾಷೆ। ಸಂದೀತುಹೊಲೆಯುಂಗೆ
ಸಂಧಿಸಿದ ಧರ್ಮಗಳಬಿಡದೆ। ಬಂದುದನು
ಕೊಂದುತಿನುತಿಹನು ಸರ್ವಜ್ಞ ॥ ೩೧ ॥
ಇಂಗುತಿಂಬಾತಂಗೆ। ಕೊಂಗೇನುಕೊಳಗೇನು?
ಸಿಂಗಳಿಕನೇನು? ಕಪಿಯೇನು? ಬೇಲಿಯಾ
ಮುಂಗಲಿಯೇನು? ಸರ್ವಜ್ಞ ॥ ೩೨ ॥
ಆಡತಿಂಬಾತಂಗೆ। ಕಾಡುಮಿಕವೇನಯ್ಯ?
ಕೋಡಗನೇನು? ಶುನಿಯೇನು? ಮಾಂಸದಾ
ಬಾಡೆಲ್ಲವೊಂದೆಸರ್ವಜ್ಞ ॥ ೩೩ ॥
ಆಡತಿಂಬುವಪಾಪ। ಕಾಡದೇಕಿಪ್ಪುದದು
ನೋಡಿದರೆವಕ್ಷನುರುಮುಂಡೆ। ತಲೆಯುಲ್ಲಿ
ಆಡುತ್ತಲಿಹುದು ಸರ್ವಜ್ಞ ॥ ೩೪ ॥
ಆಡುಂಬಅರ್ಥಿಯಲಿ। ಮಾಡುವರುಜನ್ನವನು
ತೀಡದೇಹೊಲೆಯರೆನುತಿರ್ಪ। ಹಾರುವನ
ಕಾಡಿಗಿಕ್ಕೆಂದ ಸರ್ವಜ್ಞ ॥ ೩೫ ॥
ತನ್ನಿದ್ಯೆಯುಂಟೆಂದು। ಕನ್ನೆಯಾಡನುತಿಂದು
ಉನ್ನತದಸ್ವರ್ಗಪಡೆಯುವರೆ। ಹಿಂಡಾಡ
ತಿನ್ನುವವಕೆಟ್ಟ ಸರ್ವಜ್ಞ ॥ ೩೬ ॥
ಯಾಗದಾನೆವದಿಂದ। ತೂಗಿತಿಂಬರುಆಡ
ಯಾಗದಲ್ಲೊಂದು ದಿಟವಿರಲು। ಹೋತಗಳ
ಸಾಗಲೀಸುವರೆ? ಸರ್ವಜ್ಞ ॥ ೩೭ ॥

ನೀರೊಳಗೆ ಮುಳುಗಿರ್ದ । ಸಾರವೇದವ ತರಲು
ನಿಾರಿಮಾರ್ತಾಂಡನೊಡವಂದ । ವಾಜಿಗಿಂ
ನಾರುತಾನಧಿಕ ಸರ್ವಜ್ಞ ॥ ೩೮ ॥

ನಿಂದುಹೋಹರೆಪಾಪ । ಮಂದನೆಯಕೆಸರಲ್ಲ
ನಿಂವರೇವೈಯುಮಲಪೋಪು । ದಾಪಾಪ
ನಿಂದೊಜ್ರಲೇಪ ಸರ್ವಜ್ಞ ॥ ೩೯ ॥

ಬ್ರಹ್ಮಸ್ವದೇವಸ್ವ । ಪೊಮ್ಮೆ ಮನೆಪೊಕ್ಕೊಡೆ
ಹೆಮ್ಮಗನುಸಾವ ಮನೆಬೇವು । ದಾಮೇಲಿ
ನಿರ್ಮೂಲವಹುದು ಸರ್ವಜ್ಞ ॥ ೪೦ ॥

ಅಕ್ಕರವಕಲಿತಾತ । ಒಕ್ಕಲನುತಿನಕಲಿತ
ಲೆಕ್ಕವನುಕಲಿತಕರಣಿಕನು । ನರಕದೊಳು
ಹೊಕ್ಕಾಡಕಲಿತ ಸರ್ವಜ್ಞ ॥ ೪೧ ॥

ಕಮ್ಮೆಯುೂಚೇಳಿನಾ । ಹೆಮ್ಮೆಯುೂಒಂದಯ್ಯ
ನೆಮ್ಮಿದರೆ ಚೇಳು ಹೊಡೆಯುವುದು । ಕಮ್ಮೆತಾ
ನೆಮ್ಮಿದರ ಹಿಡಿವ ಸರ್ವಜ್ಞ ॥ ೪೨ ॥

## ೨೩. ಅನ್ನಪದ್ಧತಿ.

ನೇತ್ರಗಳುಕಾಣುವುವು । ಸೂತ್ರಗಳುಉಳಿಯುವುವು
ಗಾತ್ರಕಾಲೆದ್ದು ತಿರುಗುವುವು । ಚೋಟುದ್ದ
ಸೂತ್ರದಿಂನೋಡು ಸರ್ವಜ್ಞ ॥ ೧ ॥

ಕೊಟ್ಟಣವಕುಟ್ಟುವುದು । ಮೊಟ್ಟೆಯನುಹೊರಿಸುವುದು
ಬಿಟ್ಟಿಬೇಸಾಯುಮಾಡಿಪುದು । ಅದುಚೋಟು
ಹೊಟ್ಟೆಕಾಣಣ್ಣ ಸರ್ವಜ್ಞ ॥ ೨ ॥

ನಿದ್ರೆಗಳುಬಾರವವು । ಬುದ್ಧಿಗಳುತಿಳಿಯವು
ಮುದ್ದಿನಾಮಾತುಸೊಗಸದು । ಬೋನದಾ
ಮುದ್ದೆತಪ್ಪಿದರೆ ಸರ್ವಜ್ಞ ॥ ೩ ॥

ಹಣೆಕಣ್ಣುಹತ್ತಿದುವು । ಮೊಣಕಾಲು ಬತ್ತಿದವು
ಅಣಕಪಾನಗೆಯು ಸೊಗಸದು । ಬೋನೊಂದು
ಕ್ಷಣವುತಪ್ಪಿದರೆ ಸರ್ವಜ್ಞ ॥ ೪ ॥
ಉಗುರತಿದ್ದಿಸುವುದು । ಮುಗುಳುನಗೆನಗಿಸುವುದು
ಹಗರಣದಮಾತುನುಡಿಸುವುದು । ಬೋನದಾ
ಬಗೆಯನೋಡೆಂದ ಸರ್ವಜ್ಞ ॥ ೫ ॥
ಕೆಂಬಲ್ಲಸುಳಿಸುವುದು । ತಾಂಬೂಲಮೆಲಿಸುವುದು
ರಂಭೆಯರಭೋಗಗೊಳಿಸುವುದು । ದೇಹಕ್ಕೆ
ಅಂಬಲಿಯುಬಗೆಯು ಸರ್ವಜ್ಞ ॥ ೬ ॥
ಬಟ್ಟೆಗಳಹೊದಿಸುವುದು । ಶ್ರೇಷ್ಠನೆಂದೆನಿಸುವುದು
ಕಟ್ಟಾಣಿಗತಿಗೆಕುಣಿಸುವುದು । ಗೇಣುದ್ದ
ಹೊಟ್ಟೆಕಾಣಣ್ಣ ಸರ್ವಜ್ಞ ॥ ೭ ॥
ಎತ್ತಹೋದರು ಬೋನ । ತುತ್ತುಕಟ್ಟಲುಬೇಕು
ತುತ್ತೊಂದುಗಳಿಗೆತಡೆದರೆ । ಕೈಯಪಿಡಿ
ದೆತ್ತಬೇಕೆಂದ ಸರ್ವಜ್ಞ ॥ ೮ ॥
ತುತ್ತುತುತ್ತಿಗೆಹೊಟ್ಟೆ । ತಿತ್ತಿಯಂತಾಗುವುದು
ತುತ್ತೊಂದುಗಳಿಗೆ ತಡೆದರೆ । ಮಾನವನು
ಸತ್ತಂತೆಕಾಣೊ ಸರ್ವಜ್ಞ ॥ ೯ ॥
ಅಟ್ಟೆಹರಿದಾಡುವುದು । ಮುಟ್ಟಹತ್ತೇರುವುದು
ಹೊಟ್ಟೆಹುಣ್ಣಾಗಿನಗಿಸುವುದು । ಅನ್ನದ
ತುಷ್ಟಿಕಾಣಯ್ಯ ಸರ್ವಜ್ಞ ॥ ೧೦ ॥
ಕೂಳುಕುತ್ತವೆಕುತ್ತ । ಕೂಳುಮೇಳವೆಮೇಳ
ಕೂಳೊಂದುಗಳಿಗೆತಡೆದರೆ । ಕೈಯೂರಿ
ಏಳಬೇಕೆಂದ ಸರ್ವಜ್ಞ ॥ ೧೧ ॥
ಅನ್ನದೇವರಿಗಿಂತ । ಅನ್ಯದೇವರುಇಲ್ಲ
ಅನ್ನನೀಡಲ್ಕೆಹಿರಿದಿಲ್ಲ ।ಲೋಕಕ್ಕೆ
ಅನ್ನವೇದೈವ ಸರ್ವಜ್ಞ ॥ ೧೨ ॥

## ೨೪. ಶಿಖಾಮಣಿಪದ್ಧತಿ.

ನಿಂಬೆಯಿಂಹುಳಿಯಿಲ್ಲ । ತುಂಬಿಯಿಂಕರಿದಿಲ್ಲ
ಅಂಬುಜಮಿತ್ರಗೆಣೆಯಿಲ್ಲ । ಲೋಕದೊಳು
ಶಂಭುವಿಂದಿಲ್ಲ ಸರ್ವಜ್ಞ ॥ ೧ ॥
ಇದ್ದಿಲಿಂಕರಿದಿಲ್ಲ । ಬುದ್ಧಿಯಿಂಹಿರಿದಿಲ್ಲ
ಸಿದ್ಧರಿಂದಧಿಕಬಲರಿಲ್ಲ । ದೈವದೊಳು
ರುದ್ರನಿಂದಿಲ್ಲ ಸರ್ವಜ್ಞ ॥ ೨ ॥
ಹಾಲಿನಿಂಬಿಳುಪಿಲ್ಲ । ನಾಲಿಗೆಯನುಣುಪಿಲ್ಲ
ಓಲೆಯಿಂದಧಿಕಬಲವಿಲ್ಲ । ದೈವದೊಳು
ಶೂಲಿಯಿಂದಿಲ್ಲ ಸರ್ವಜ್ಞ ॥ ೩ ॥
ಮೇರುವಿಗೆಯೆಣೆಯಿಲ್ಲ । ಧಾರಿಣಿಗೆ ಪಡಿಯಿಲ್ಲ
ಕಾರುಣಿಕಮಪ್ಪಹಿತರಿಲ್ಲ । ದೈವದೊಳು
ವೀರನಿಂದಿಲ್ಲ ಸರ್ವಜ್ಞ ॥ ೪ ॥
ರಾಮನಾಮವೆ ನಾಮ । ಸಾಮವೇದವೆ ವೇದ
ಆಮಹಾರುದ್ರಪರದೈವ । ಲೋಕದೊಳು
ಭೀಮನೇಭಕ್ತ ಸರ್ವಜ್ಞ ॥ ೫ ॥
ಒಂದಕ್ಕೆ ಎಣೆಯಿಲ್ಲ । ಸಂದಿಲ್ಲವೆರಡಕ್ಕೆ
ಮುಂದೆಮೂರಕ್ಕೆಯೇನಿಲ್ಲ । ನಾಲ್ಕಕ್ಕೆ
ಹಿಂದುಮುಂದಿಲ್ಲ ಸರ್ವಜ್ಞ ॥ ೬ ॥
ಯೋಗಿಗೆಕುಲವಿಲ್ಲ । ಸಾಗರಕೆನೆಲೆಯಿಲ್ಲ
ಯೋಗವಟ್ಟಿಗೆಗೆಸೆರಗಿಲ್ಲ । ಧರ್ಮಕ್ಕೆ
ಆಗುಹೋಗಿಲ್ಲ ಸರ್ವಜ್ಞ ॥ ೭ ॥
ಕುಲವಿಲ್ಲಯೋಗಿಗೇ । ಚಲ್ಲವಿಲ್ಲಬಲ್ಲಿದಗೆ
ತೊಲೆಕಂಭವಿಲ್ಲಗಗನಕ್ಕೆ । ಸ್ವರ್ಗದಲಿ
ಹೊಲೆಗೇರಿಯಿಲ್ಲ ಸರ್ವಜ್ಞ ॥ ೮ ॥

ಲಿಂಗದಿಂಪಿರಿದಿಲ್ಲ। ಗಂಗೆಗಾಹೊಲೆಯಿಲ್ಲ
ಕಂಗಳಿಂದಧಿಕಹಿತರಿಲ್ಲ। ಭಕ್ತರೊಳು
ಜಂಗಮಿಂದಿಲ್ಲ ಸರ್ವಜ್ಞ ॥ ೯ ॥
ದಿನಪತಿಗೆಯೆಣೆಯಿಲ್ಲ। ಧನಪತಿಗೆಸ್ಥಿರವಿಲ್ಲ
ಅನುಭವಿಗೆಬೇರೆಮತವಿಲ್ಲ। ಬಲ್ಲವಗೆ
ಮುನಿವವರೆಯಿಲ್ಲ ಸರ್ವಜ್ಞ ॥ ೧೦ ॥
ಜಾಣಂಗೆಮುನಿಸಿಲ್ಲ। ಕೋಣಂಗೆಮತಿಯಿಲ್ಲ
ಕಾಣದಂಧಕಗೆಹಗಲಿಲ್ಲ। ಸಿಂಹಕ್ಕೆ
ಕ್ಷೀಣವೇಇಲ್ಲ ಸರ್ವಜ್ಞ ॥ ೧೧ ॥
ಸೀತೆಯಿಂಹೆಣ್ಣಿಲ್ಲ। ಸೂತನಿಂದಾಳಿಲ್ಲ
ಮಾತನಿಂಬಿಟ್ಟಗಿದಿರಿಲ್ಲ। ಶೂದ್ರಂಗೆ
ಭೀತಿಯೇಇಲ್ಲ ಸರ್ವಜ್ಞ ॥ ೧೨ ॥
ನಿದ್ರೆಗೆಬುದ್ಧಿಲ್ಲ। ಭದ್ರಂಗೆತಾಯಿಲ್ಲ
ಕದ್ದುಕೊಂಬಂಗೆಬದುಕಿಲ್ಲ। ಸಾವಂಗೆ
ಮದ್ದುಗಳೆಯಿಲ್ಲ ಸರ್ವಜ್ಞ ॥ ೧೩ ॥
ಸತ್ಯಕ್ಕೆಸಮವಿಲ್ಲ। ಭಕ್ತಿಗೇಬೆಲೆಯಿಲ್ಲ
ಹೆತ್ತಮ್ಮಗಿಂತಹಿತರಿಲ್ಲ। ಮನುಜರ್ಗೆ
ನಿತ್ಯವೇಇಲ್ಲ ಸರ್ವಜ್ಞ ॥ ೧೪ ॥
ಎಲ್ಲಬಲ್ಲವರಿಲ್ಲ। ಬಲ್ಲಿದರುಮೊದಲಿಲ್ಲ
ಒಲ್ಲದಳನೊಲಿಸಿದವರಿಲ್ಲ। ಸಾಹಿತ್ಯ
ವೆಲ್ಲರಿಗುಮಿಲ್ಲ ಸರ್ವಜ್ಞ ॥ ೧೫ ॥

* * * * * ॥ ೧೬ ॥

## ೨೫. ನೀತಿ ಪದ್ಧತಿ.

ಎರೆಯನೆಲಹೊಂದುವುದು। ದೊರೆಯನೋಲೈಸುವುದು
ಉರಗಭೂಷಣನನೆನೆಯುವುದು। ಭಾಗ್ಯತಾ
ನರಿದಲ್ಲವವಗೆ ಸರ್ವಜ್ಞ ॥ ೧ ॥

ಉತ್ತರೆಯುಹುಸಿದರೆ । ಹೆತ್ತಮ್ಮತೊರೆದರೆ
ಸತ್ಯರುತಪ್ಪಿನಡೆದರೆ । ಲೋಕವಿಂ
ನೆತ್ತಸೇರುವುದು? ಸರ್ವಜ್ಞ ॥ ೨ ॥
ಆರಯ್ದುನುಡಿಯುವವನು । ಆರಯ್ದುನಡೆವವನು
ಆರಯ್ದು ಅಡಿಯನಿಡುವವನು । ಲೋಕಕ್ಕೆ
ಆರಾಧ್ಯನಕ್ಕು ಸರ್ವಜ್ಞ ॥ ೩ ॥
ಗಂಹರವಹೊಗುವುದಾ । ಸಿಂಹವನಿರಿಯುವುದು
ಸಂಹಾರವಮಾಡಿತರಿಯುವುದು । ದುರ್ಜನರ
ಜಿಹ್ವೆಕಾಣಣ್ಣ ಸರ್ವಜ್ಞ ॥ ೪ ॥
ಸುರಗಿಯಾವೊನೆನಂಜು । ಉರಗನಾಹಲುನಂಜು
ಬೆರಸಿತಪ್ಪುವರನುಡಿನಂಜು । ದುರ್ಜನರ
ಹರುಷವೇನಂಜು ಸರ್ವಜ್ಞ ॥ ೫ ॥
ಮುತ್ತುನೀರೊಳುಹುಟ್ಟಿ । ಹತ್ತಕ್ಕೆಬೆಲೆಯಹುದು
ಹತ್ತುಚಿಪ್ಪುಕೂಡಿಹಣವಿಲ್ಲ । ವಿದ್ಯೆಯಾ
ಬಿತ್ತುಲೇಸೆಂದ ಸರ್ವಜ್ಞ ॥ ೬ ॥
ಸಿರಿಯಸಂಸಾರವನು । ಹಿರಿದೆಂದು ನಂಬದಿರು
ಹಿರಿದಾಗಿಸಂತೆನೆರೆದೊಂದು । ಗಳಿಗೆಯೊಳು
ಹರಿದುಹೋದಂತೆ ಸರ್ವಜ್ಞ ॥ ೭ ॥
ಕೇಳುವರುವುಳ್ಳೊಡೆ । ಹೇಳುವುದುಬುದ್ಧಿಯನು
ಕೇಳದೇಸಿಕ್ಕಿಕೆಡುವವಗೆ । ಬುದ್ಧಿಯನು
ಹೇಳುವನೆಹೆಡ್ಡ ಸರ್ವಜ್ಞ ॥ ೮ ॥
ನರಳುವಗೆಕಡುರೋಗ । ಮೊರೆವಂಗೆರಾಗವು
ಬರೆವಂಗೆಓದುಬರುವಂತೆ । ಸಾಧಿಪಗೆ
ಬಾರದುದುಉಂಟೆ? ಸರ್ವಜ್ಞ ॥ ೯ ॥
ಕಣ್ಣುನಾಲಿಗೆಮನವು । ತನ್ನದೆಂದೆನಬೇಡ
ಅನ್ಯರುಕೊಂದರೆನಬೇಡ । ಇವುಮೂರು
ತನ್ನಕೊಲ್ಲುವುವು ಸರ್ವಜ್ಞ ॥ ೧೦ ॥

ನಿತ್ಯವುಳ್ಳವರೀಗ । ಸತ್ತಹಾಗಿರುವರು
ನಿತ್ಯವಿಲ್ಲದರಒಡನಾಟ । ಬೇಲಿಯ
ಒತ್ತಿನಂತಕ್ಕು ಸರ್ವಜ್ಞ ॥ ೧೧ ॥
ಬಲ್ಲವರಒಡನಾಟ । ಬೆಲ್ಲವನುಮೆದ್ದಂತೆ
ಅಲ್ಲವಹುದೆಂಬಅಜ್ಞಾನಿ । ಯೊಡನಾಟ
ಕಲ್ಲುಹಾಯ್ದಂತೆ ಸರ್ವಜ್ಞ ॥ ೧೨ ॥
ಒಳ್ಳೆಯವನಿಲ್ಲದೂ । ರ್ಕಳ್ಳನೊಡನಾಟವು
ಸುಳ್ಳನಮಾತು ಇವುಮೂರು । ಕೆಸರೊಳಗೆ
ಮುಳ್ಳುತುಳಿದಂತೆ ಸರ್ವಜ್ಞ ॥ ೧೩ ॥
ಕೆಂಪಿನಾದಾಸಳಕೆ । ಕೆಂಪುಂಟುಕಂಪಿಲ್ಲ
ಕೆಂಪಿನವರಲ್ಲಿಗುಣವಿಲ್ಲ । ಕದ್ದೊಡವೆ
ಕೆಂಪಿರ್ದರೇನು? ಸರ್ವಜ್ಞ ॥ ೧೪ ॥
ಗೀತವಿದ್ಯೆಯನಿತ್ಯ । ಜಾತರಾವೊಲುಮೆಯ
ಪ್ರೀತಿಯನುನುಡಿಯಲರಿಯದೆ । ಹೋಗುವರು
ಮಾತಿನಿಂಕೇಡು(?) ಸರ್ವಜ್ಞ ॥ ೧೫ ॥
ಧನಕನಕವುಳ್ಳನಕ । ದಿನಕರನಂತಕ್ಕು
ಧನಕನಕಹೋದಮರುದಿವಸ । ಆಅಣ್ಣ
ಶುನಕನಂತಕ್ಕು ಸರ್ವಜ್ಞ ॥ ೧೬ ॥
* * * * ॥ ೧೭—೧೮ ॥
ಸಿರಿಯಣ್ಣವುಳ್ಳನಕ । ಹಿರಿಯಣ್ಣನಂತಿರ್ಕು
ಸಿರಿಯಣ್ಣಹೋದಬೆಳಗಾಗ । ಆಯಣ್ಣ
ನರಿಯಣ್ಣನಕ್ಕು ಸರ್ವಜ್ಞ ॥ ೧೯ ॥
ಎಂಟುಹಣವುಳ್ಳನಕ । ನೆಂಟರುಘನವಕ್ಕು
ಎಂಟುಹಣಹೋದಬೆಳಗಾಗ । ಆಳಿನಾ
ಹೆಂಟೆಯಂತಕ್ಕು ಸರ್ವಜ್ಞ ॥ ೨೦ ॥
ಪ್ರತ್ಯಕ್ಷದುರಗನ । ಮಸ್ತಕದಹಲುನಂಜು
ಮಿಥ್ಯದುರ್ಜನರಹೊಲ್ಲೆಹವು । ಪಾಪದ
ಮಸ್ತಕನಂಜು ಸರ್ವಜ್ಞ ॥ ೨೧ ॥

ನಾಲ್ಕುಹಣವುಳ್ಳನಕ । ಸಾಕಾರಘನವಕ್ಕು
ನಾಲ್ಕುಹಣಹೋದಬಳಿಗಾಗ । ಆಅಣ್ಣ
ನೂಕಣ್ಣನೆಂದ ಸರ್ವಜ್ಞ ॥ ೨೨ ॥
ಎರಡುಹಣವುಳ್ಳನಕ । ಗರುಡನಂತಿರುತಿರ್ಕು
ಎರಡುಹಣಹೋದಬಳಿಗಾಗ । ಅರೆಬೆಂದ
ಕರಡಿಯಂತಕ್ಕು ಸರ್ವಜ್ಞ ॥ ೨೩ ॥
ಸಿರಿಬಲವನುಳ್ಳಾಗ । ಮೆರೆಯದಿರ್ಪನುಜಾಣ
ಕೊರತೆಯಾದಾಗಕೊಡುವೆನು । ಕಡಿವೆನೆಂ
ದರಿವನೇಹೆಡ್ಡ ಸರ್ವಜ್ಞ ॥ ೨೪ ॥
ಸಜ್ಜನರುಸತ್ತೊಡಂ । ಇದ್ದಂತೆಯಿರುತಿಹರು
ದುರ್ಜನನುಸತ್ತರೇನುಂಟು? ಹತ್ತಿರ್ದ
ಕಜ್ಜಿಹರಿದಂತೆ ಸರ್ವಜ್ಞ ॥ ೨೫ ॥

## ೨೬. ಉತ್ತಮಪದ್ಧತಿ.

ಹಂಗಿನಾಹಾಲಿಂದ । ಹಿಂಗಿದಂಬಲಿಲೇಸು
ಭಂಗಪಟ್ಟುಂಬಬಿಸಿಗಿಂತ । ತಿರಿದುಂಬ
ತಂಗಳೇಲೇಸು ಸರ್ವಜ್ಞ ॥ ೧ ॥
ತಿಗುಳನಾನೆರೆಗಿಂತ । ಬಗುಳುವಾನಾಯ್ಲೇಸು
ಮುಗುಳಿಯಾಮರದನೆಳಲಿಂದ । ನುಂಗುವಾ
ನೆಗಳೆ ಲೇಸೆಂದ ಸರ್ವಜ್ಞ ॥ ೨ ॥
ಚುಚ್ಚುವಾಕೆರಕಿಂತ । ಕಚ್ಚುವಾನಾಯ್ಲೇಸು
ಮುಚ್ಚರಿಸಿಜರೆವಸತಿಗಿಂತ । ಹೊಡೆದೊಯ್ವ
ಕಿಚ್ಚೆಲೇಸೆಂದ ಸರ್ವಜ್ಞ ॥ ೩ ॥
ಸೋರುವಾಮನೆಗಿಂತ । ದಾರಿಯಾಮರಲೇಸು
ದಾರಿದ್ರ್ಯದವನಬದುಕಿಂದ । ಹೊಡೆದೊಯ್ವ
ಮಾರಿಯೇಲೇಸು ಸರ್ವಜ್ಞ ॥ ೪ ॥

ನಾಟಿರಾಗವೆಲೇಸು । ತೋಟವುಲ್ಲಿಗೆಲೇಸು
ಕೂಟವೇಲೇಸುಹಿರಿಯುವರಾ । ಶಿವನನರಿ
ವಾಟವೇಲೇಸು ಸರ್ವಜ್ಞ ॥ ೫ ॥
ಕುದಿಯುದಿಹಕೂಳಿಂದ । ಕದಡಿದಂಬಲಿಲೇಸು
ಹೃದಯುಶೂನ್ಯೆಯುರಜಲವಿಂದ । ಒಲಿದವರ
ಕದನವೇಲೇಸು ಸರ್ವಜ್ಞ ॥ ೬ ॥
ಹರಗೆಹಂದಲೆಲೇಸು । ಮರಣಭೂತಕೆಲೇಸು
ವರಯುದ್ಧಲೇಸುಸುಭಟಂಗೆ । ಯೋಗಿಗೆ
ಹರಯೋಗಲೇಸು ಸರ್ವಜ್ಞ ॥ ೭ ॥
ಹಾಲುಬೋನವುಲೇಸು । ಬಾಲೆಸದನಕೆಲೇಸು
ಸಾಲವಿಲ್ಲದನಮನೆಲೇಸು । ಬಾಲ್ಯದ
ಲೀಲೆಯೇಲೇಸು ಸರ್ವಜ್ಞ ॥ ೮ ॥
ತುಪ್ಪಬೋನವೆಲೇಸು । ಉಪ್ಪರಿಗೆಗುಡಿಲೇಸು
ಅಪ್ಪಬಾರೆಂಬಮಗಲೇಸು । ಊರಿಂಗೆ
ಚಿಪ್ಪಿಗನೆಲೇಸು ಸರ್ವಜ್ಞ ॥ ೯ ॥
ಹುತ್ತುಹಾವಿಗೆಲೇಸು । ಮುತ್ತುಕೊರಳಿಗೆಲೇಸು
ಕತ್ತೆಯಾಹೇರುತರೆಲೇಸು । ತೈಲದಾ
ತುತ್ತುಲೇಸೆಂದ ಸರ್ವಜ್ಞ ॥ ೧೦ ॥
ಕಂಚಿಯ ಫಲಲೇಸು । ಮಿಂಚು ಮುಗಿಲಿಗೆಲೇಸು
ಕೆಂಚಿನಸ್ತ್ರೀಯುಳಿರೆಲೇಸು । ಊರಿಗೆ
ಪಾಂಚಾಳ ಲೇಸು ಸರ್ವಜ್ಞ ॥ ೧೧ ॥
ಎಮ್ಮೆ ಹಯನವೆಲೇಸು । ಕಮ್ಮನಾಂಬ್ರವುಲೇಸು
ಸುಮ್ಮನೇ ಒಡವೆಬರೆಲೇಸು । ಊರಿಗೇ
ಕಮ್ಮಾರಲೇಸು ಸರ್ವಜ್ಞ ॥ ೧೨ ॥
ಹಡಗು ಗಾಳಿಗೆಲೇಸು । ಗುಡುಗುಮುಗಿಲಿಗೆ ಲೇಸು
ಒಡಹುಟ್ಟಿದವರು ಇರೆಲೇಸು । ಊರಿಗೆ
ಬಡಗಿಲೇಸೆಂದ ಸರ್ವಜ್ಞ ॥ ೧೩ ॥

ಅಂಬು ಬಿಲ್ಲಿಗೆಲೇಸು । ತುಂಬು ಕೇರಿಗೆಲೇಸು
ಸಂಬಾರಲೇಸು ಅಡಿಗೆಗೇ । ಊರಿಗೆ
ಕುಂಬಾರಲೇಸು ಸರ್ವಜ್ಞ ॥ ೧೪ ॥
ಅಗಸೆ ವೂರಿಗೆಲೇಸು । ಸೊಗಸು ರಾಗಕೆಲೇಸು
ಬಗಿಸೆಯುಳ್ಳವರ ಕೆಳೆಲೇಸು । ಊರಿಗೆ
ಅಗಸಲೇಸೆಂದ ಸರ್ವಜ್ಞ ॥ ೧೫ ॥
ಅಕ್ಕಿಯೋಗರಲೇಸು । ತಕ್ಕವರ ಕೆಳೆಲೇಸು
ಹಕ್ಕಿಗಳೊಳಗೆಗಿಳಿಲೇಸು । ಊರಿಗೆ
ಅಕಸಾಲೆಲೇಸು ಸರ್ವಜ್ಞ ॥ ೧೬ ॥
ಒಸರುವಾ ತೊರೆಲೇಸು । ಕೆಸರುಳ್ಳಕೆರೆಲೇಸು
ಹೆಸರುಳ್ಳವರನೆರೆಲೇಸು । ಸಾಗರವು
ವಸುಧೆಗೆಲೇಸು ಸರ್ವಜ್ಞ ॥ ೧೭ ॥
ತೊಗರಿಯಾ ತೊಗೆಲೇಸು । ತಿಗುರಿಯಾ ವೊಳೆಲೇಸು
ಟಗರಿಗೇ ಹಿಂಗಾಲಸತ್ವ । ರಾಜರ್ಗೆ
ಬಿಗಿಬಂದುಲೇಸು ಸರ್ವಜ್ಞ ॥ ೧೮ ॥
ಉದ್ದಿನಾ ವಡೆಲೇಸು । ಬುದ್ಧಿವಂತಿಗೆಲೇಸು
ಬಿದ್ದೊಡವೆ ಕೈಗೆಬರೆಲೇಸು । ಶಿಶುವಿಂಗೆ
ಮುದ್ದುತಾಲೇಸು ಸರ್ವಜ್ಞ ॥ ೧೯ ॥
ತಿರುಳುಹೋಳಿಗೆ ಲೇಸು । ಮುರುಕು ಬೆಳ್ಳೆಲೆ ಲೇಸು
ಅರಿಕೆಯುಳ್ಳವರ ನಡೆಲೇಸು । ಪಾಯಸವ
ಜುರುವುದೇಲೇಸು ಸರ್ವಜ್ಞ ॥ ೨೦ ॥
ಜಾಣರಾನುಡಿಲೇಸು । ಗಾನದಾ ಸವಿಲೇಸು
ಮಾಣದಾಮಧುರರಸಲೇಸು । ಕೂರ್ತವರ
ಕಾಣುವುದೆ ಲೇಸು ಸರ್ವಜ್ಞ ॥ ೨೧ ॥
ಕಾಸುವೆಚ್ಚಕೆಲೇಸು । ದೋಸೆಕ್ಷೀರಕೆಲೇಸು
ಕೂಸುಮನೆಯೊಳಗೆ ಇರೆಲೇಸು । ಹಿರಿಯರ್ಗೆ
ಭಾಸಲೇ ಲೇಸುಸರ್ವಜ್ಞ ॥ ೨೨ ॥

ಮಜ್ಜಿಗೆಯು ಊಟಕ್ಕೆ । ಮಜ್ಜನಕೆಮಡಿಲೇಸು
ಕಜ್ಜಾಯತುಪ್ಪಮುಣಲೇಸು । ಮನೆಗೊಬ್ಬ
ಅಜ್ಜಿಯೇಲೇಸು ಸರ್ವಜ್ಞ ॥ ೨೩ ॥
ಮಂಜಿಗಾಮಳೆಲೇಸು । ನಂಜು ಸರ್ಪಕೆಲೇಸು
ಪಂಜರವುಲೇಸು ಅರಗಿಳಿಗೆ । ಜಾಡಂಗೆ
ಗಂಜಿಲೇಸೆಂದ ಸರ್ವಜ್ಞ ॥ ೨೪ ॥
ಜಾಣಜಾಣಗೆಲೇಸು । ಕೋಣೆಗಾ ಮಗುಲೇಸು
ನಾಣ್ಯತಾಲೇಸು ಮಂದಿರಕೆ । ಊರಿಗೇ
ಗಾಣಿಗಲೇಸು ಸರ್ವಜ್ಞ ॥ ೨೫ ॥
ಜಾಜಿಕುಸುಮವುಲೇಸು । ತೇಜಿವಾಹನಲೇಸು
ರಾಜಂಗೆ ಒಕ್ಕಲಿರೆಲೇಸು । ಊಟಕ್ಕೆ
ರಾಜಾನ್ನಲೇಸು ಸರ್ವಜ್ಞ ॥ ೨೬ ॥
ಗಾಳಿಧೂಳಿಯದಿನಕೆ । ಮಾಳಿಗೆಯ ಮನೆಲೇಸು
ಹೋಳಿಗೆ ತುಪ್ಪಮುಣಲೇಸು । ಮೇಲೊಂದು
ವೀಳೆಯವುಲೇಸು ಸರ್ವಜ್ಞ ॥ ೨೭ ॥
ಹೋರುವಾಸತಿಗಿಂತ । ಸೋರುವಾಮನೆ ಲೇಸು
ಪೂರಯಿಸದವನಕೆಳೆಗಿಂತ । ಹೊರಗಣ
ಮಾರಿಲೇಸೆಂದ ಸರ್ವಜ್ಞ ॥ ೨೮ ॥
ಸಿರಿಯು ಬಂದರೆಲೇಸು । ಹಿರಿಯ ಪೂಜ್ಯತೆಲೇಸು
ಮರಣವಿಲ್ಲದ ಮಕ್ಕಳಿರೆಲೇಸು । ಈಶ್ವರಗೆ
ಶರಣೆತಾಂಲೇಸು ಸರ್ವಜ್ಞ ॥ ೨೯ ॥
ಹಾಸಂಗಿಹರಿವರೇ । ವೇಸಿಯರು ವೊಲಿವರೇ
ವೀಸಕ್ಕೆ ವೀಸನೆರೆಯುವರೆ । ಇವುಮೂರು
ಈಶನ ಕರುಣ ಸರ್ವಜ್ಞ ॥ ೩೦ ॥
ರಾಗಯೋಗಿಗೆ ಹೊಲ್ಲ । ಭೋಗತಪಸಿಗೆಹೊಲ್ಲ
ಓಗರಕೆಎಣ್ಣೆಯದುಹೊಲ್ಲ । ಪರನಿಂದೆ
ಯೋಗಳುಂಹೊಲ್ಲಸರ್ವಜ್ಞ ॥ ೩೧ ॥

ನಟ್ಟಿಡವಿಯಾ ಮಳೆಯು । ದುಷ್ಟರಾಸಂಗವು
ಕಷ್ಟೆಯಾದವಳ ತಲೆಬೇನೆ । ಇವುಮೂರು
ಕೆಟ್ಟರೆ ಸಾಕು ಸರ್ವಜ್ಞ ॥ ೩೨ ॥
ಗಿಡ್ಡಹೆಂಡತಿಲೇಸು । ಮಡ್ಡಿಕುದುರೆಗೆಲೇಸು
ಬಡ್ಡಿಯುಸಾಲಕೊಡಲೇಸು । ಹೂಗಳೊಳು
ಪಡ್ಡಳಿಯೆಲೇಸು ಸರ್ವಜ್ಞ ॥ ೩೩ ॥
ಅಜ್ಜಿಯಿಲ್ಲದ ಮನೆಯು । ಮಜ್ಜಿಗಿಲ್ಲದ ಊಟ
ಕೊಜ್ಜೆಯಗು ಇಲ್ಲದರಮನೆಯು । ಇವುಮೂರು
ಲಜ್ಜೆಗೆಟ್ಟಂತೆ ಸರ್ವಜ್ಞ ॥ ೩೪ ॥
ಓಡಿಹೋದವಕೆಟ್ಟ । ಜಾಡನೇಯದೆಕೆಟ್ಟ
ನೋಡದೇಕೆಟ್ಟ ಬೆಳೆದಹೊಲ । ಪರವೆಣ್ಣ
ಕೂಡಿದವಕೆಟ್ಟ ಸರ್ವಜ್ಞ ॥ ೩೫ ॥
ಹೇಳಿದರೆ ಕೇಳುವನ । ಕೀಳಿನಲಿಸಿರಿಯುಂಟು
ಹೇಳಿದಮಾತುಕೇಳದನ । ಬಿಡು ಅವನ
ಗಾಳಿಯೇ ಬೇಡ ಸರ್ವಜ್ಞ ॥ ೩೬ ॥
ಹರದನಾವಿಶ್ವಾಸ । ಹಿರಿದುನಂಬಲುಬೇಡ
ಗರಗಸದೊಡನೆ ಮರಹೋರಿ । ತನ್ನ ತಾ
ನಿರಿದುಕೊಂಡಂತೆ ಸರ್ವಜ್ಞ ॥ ೩೭ ॥
ಉತ್ತಮದ ಸತಿಮೇಲೆ । ಮತ್ತೆಸೂಳೆಯದೇಕೆ?
ಕುತ್ತದಮೇಲೆ ಮಸಗುತಿಹ । ಆತಂಗೆ
ಮತ್ತೆಕಿಚ್ಚೇಕೆ? ಸರ್ವಜ್ಞ ॥ ೩೮ ॥
ಅಂಬಲಿಯನುಣಸಲ್ಲ । ಕಂಬಳಿಹೊದೆಯಸಲ್ಲ
ಡೊಂಬತೀಸೂಳೆಯಿರಹೊಲ್ಲ । ತನಗಾಗ
ದುಂಬುವುದುಹೊಲ್ಲ ಸರ್ವಜ್ಞ ॥ ೩೯ ॥
ಕಟ್ಟಾಸೆಭಾವಿಗೆ । ಕೊಟ್ಟಾಸೆಸೂಳೆಗೆ
ಪಟ್ಟಣದಾಸೆಬಡವಂಗೆ । ಬೇಡಿದಗೆ
ಕೊಟ್ಟಷ್ಟುಆಸೆ ಸರ್ವಜ್ಞ ॥ ೪೦ ॥

ಒತ್ತಿದಾಜಗಳಕ್ಕೆ । ಸುತ್ತುಮುತ್ತಿಗೆಯೇಕೆ?
ತೊತ್ತುಳದುಳಿದು ಕೊಲುವಾಗ । ಉಳುಮೆಯ
ಕರ್ತಬಂದಾನು ಸರ್ವಜ್ಞ ॥ ೪೧

ಸಾಕಿದವರನುತಿಂಬ । ಸೋಕಿದವರನುತಿಂಬ
ತಾಕಿಸಿದವರಬಡಿತಿಂಬ । ಬೇಡನ
ಏಕಾಂತಬೇಡ ಸರ್ವಜ್ಞ ॥ ೪೨

ಒಡಹುಟ್ಟಿದನ ಭಾಗ । ದೊಡವೆಯನು ಬೇಡಿದರೆ
ತಡೆಯದೇಕೊಡ ವುದತಿಚಂದ । ಮಡಿದರೆ
ಕೊಡದವನೆ ಕೆಟ್ಟ ಸರ್ವಜ್ಞ ॥ ೪೩

ನಾಡನಾಡುವಅರಸು । ರೂಢಿಗೀಶ್ವರನಂತೆ
ಕಾಡಹಂದಿವೊಲುಗರ್ಜಿಸಲು । ಆನಾಡು
ಕಾಡಾಗದಿಹುದೆ? ಸರ್ವಜ್ಞ ॥ ೪೪

ಕಿರುವಿಾನ ಹಿರಿವಿಾನ । ಕೊರೆಕೊರೆದುತಿಂಬಾತ
ಇರುವಳಾಒಬ್ಬಮಗಸಾಯೆ । ತಾನಿನ್ನು
ಕೊರಗದೆಯಿಹಳೆ? ಸರ್ವಜ್ಞ ॥ ೪೫

ಪರಸ್ತ್ರೀಯಸಂಗದಿಂ । ನರಲೋಕಚಿಃಎನಲು
ಸಿರಿತೊಲಗಿತಲೆಯು ಕಡಿದತ್ತು । ರಾವಣಗೆ
ಪರಲೋಕವಾಯ್ತೆ? ಸರ್ವಜ್ಞ ॥ ೪೬

* * * * ॥ ೪೭—೪೮

## ೨೭. ನಿಂದಾಪದ್ಧತಿ.

ಬಣಜಿಗಭಕುತನಲ್ಲ । ಅಣಬೆಸತ್ತಿಗೆಯಲ್ಲ
ಕೊಣಕಲ್ಲುಬಂಗಾರವಲ್ಲ । ಬಣಜಿಗನು
ಗುಣವಂತನಲ್ಲ ಸರ್ವಜ್ಞ ॥ ೧

ಗಾಣಿಗನ ಒಡನಾಟ । ಕೋಣನಾಬೇಸಾಯ
ಕ್ಷೀಣವಹುದಲ್ಲಿಸುಖವಿಲ್ಲ । ಅದರಿಂದ
ಪ್ರಾಣದಾಗಾಸಿ ಸರ್ವಜ್ಞ ॥ ೨

ಗಾಣಿಗನುಈಶ್ವರನ। ಕಾಣೆನೆಂಬುದುಸಹಜ
ಏಣಾಂಕಧರನುಬರಲವನ। ಕೈಯಲ್ಲಿ
ಗಾಣವಾಡಿಸುವ ಸರ್ವಜ್ಞ ॥ ೩ ॥
ಮಠಪತಿಗೆಭಕ್ತಿಲ್ಲ। ಕಟುಕನಿಗೆಮುಕ್ತಿಲ್ಲ
ಪಟವೆಂಬುದಕ್ಕೆ ನೆಳಲಿಲ್ಲ। ಹಟಗಾರ
ಕುಟಿಲನಹನೆಂದ ಸರ್ವಜ್ಞ ॥ ೪ ॥
ಭಂಗಿಯನುಸೇದುವನ। ಭಂಗವನುನೋಡಿರಿ
ಭಂಗಿಯರಸವುತಲೆಗೇರೆ। ಚಿತ್ರದ
ಬಿಂಗಿಯಂತಿಹನು ಸರ್ವಜ್ಞ ॥ ೫ ॥
ಮದ್ದುತಿಂಬವನುಪ್ರ। ಬುದ್ಧನೆಂದೆನಬೇಡ
ಮದ್ದುತಲೆಗೇರಿಇರುವಾಗ। ಎಡಕತ್ತೆ
ಗುದ್ದುವುದನರಿಯ ಸರ್ವಜ್ಞ ॥ ೬ ॥
ಹೊಗೆಯಸೇದುವನನ್ನ। ಸುಗುಣನೆಂದೆನಬೇಡ
ಹೊಗೆಯತೆಗೆದೆಲೆಯಮೆಲಲು। ಶೇಂದಿಯ
ಲಗಳೆಯಂತಿಹುದು ಸರ್ವಜ್ಞ ॥ ೭ ॥
ಬಚ್ಚಲಿಲ್ಲದಮನೆಯು। ಕೆಚ್ಚಲಿಲ್ಲದಹಯನು
ನಚ್ಚಿಗಿಲ್ಲದನಸಂಸಾರ। ಬೇಸಿಗೆಯ
ಕಿಚ್ಚುಕಾಯ್ದಂತೆ ಸರ್ವಜ್ಞ ॥ ೮ ॥
ಬೇಡನೊಳ್ಳಿದನೆಂದು। ಆಡದಿರುಸಭೆಯೊಳಗೆ
ಬೇಡಿದುದಕೊಡದಿರಲ್ಕವನು। ಮರುದಿವಸ
ಗೋಡೆಯನುಕೊರೆವ ಸರ್ವಜ್ಞ ॥ ೯ ॥
ಆಡಿಹುಸಿಯಲುಹೊಲ್ಲ। ಕೂಡಿತಪ್ಪಲುಹೊಲ್ಲ
ಕಾಡುವನೆಂಟಬರಹೊಲ್ಲ। ಧನಹೀನ
ನಾಡಲೇಹೊಲ್ಲ ಸರ್ವಜ್ಞ ॥ ೧೦ ॥
ಕಣುಕನೆನೆದರೆಹೊಲ್ಲ। ಗಣಿಕೆಮುದುಕಿಯುಹೊಲ್ಲ
ಕಣುಕಟ್ಟುಹೊಲ್ಲಮನುಜಂಗೆ। ಅರಮನೆಗೆ
ಒಣತಂಟೆಹೊಲ್ಲ ಸರ್ವಜ್ಞ ॥ ೧೧ ॥

ಓತಿತ್ತಹೆಣ್ಣಿಂಗೆ । ಸೋತುಹಲುಬುವಹೆಡ್ಡ
ಹೂತಮಲ್ಲಿಗೆಯುವನದೊಳಗೆ । ತುರುಬಿಲ್ಲ
ದಾತಸುಳಿದಂತೆ ಸರ್ವಜ್ಞ ॥ ೧೨ ॥

* * * * ॥ ೧೩ ॥

ಬೇಡಗಡವಿಯಚಿಂತೆ । ಆಡಿಗೇಮೋಳೆಚಿಂತೆ
ಮೋಡದಾಚಿಂತೆನವಿಲಿಂಗೆ । ಹೆಳೆವನಡೆ
ದಾಡುವುದೆಚಿಂತೆ ಸರ್ವಜ್ಞ ॥ ೧೪ ॥

ಅಲಸಿಕೆಯನುಳ್ಳವನು । ಕೆಲಸಿಲ್ಲ ಕುಳ್ಳಿರುವ
ಕೆಲಸವ್ಯವಹಾರಕಲಿತವಗೆ । ಬೇರಿಂದ
ಹಲಸುಕಾತಂತೆ ಸರ್ವಜ್ಞ ॥ ೧೫ ॥

ಬಡವಬಟ್ಟೆಯಹೋಹ । ರೊಡನೆತಿರುಗುವುದೇಕೆ?
ಬಡತನವೆಂಬಹುಲಿಗೂಡಿ । ಬರುತಿರಲು
ನುಡಿಸುವವರಿಲ್ಲ ಸರ್ವಜ್ಞ ॥ ೧೬ ॥

ತಪ್ಪುಮಾಡಿದವಂಗೆ । ಒಪ್ಪುವುದುಸಂಕಲೆಯು
ತಪ್ಪುಮಾಡದೆಯೆಸಂಕಲೆಯ । ಸಹವಾಗಿ
ಒಪ್ಪುವನೆಪಾಪಿ ಸರ್ವಜ್ಞ ॥ ೧೭ ॥

ಮುತ್ತುಮೂಗುತಿಗೇಕೆ? ತುತ್ತೇಕೆನೊಣಗಳಿಗೆ?
ಕತ್ತಲೆಯಮುಡಿಗಳೇಕೆ? ಸಿಡುಗೆಲಸ
ತೊತ್ತಿಗಿನ್ನೇಕೆ? ಸರ್ವಜ್ಞ ॥ ೧೮ ॥

ಆಡಿಗಿಟ್ಟೆಡೆಯೇಕೆ? ಬೋಡಂಗೆನಗೆಯೇಕೆ?
ಕೋಡಗದಕ್ಕೈಗೆಬಳೆಯೇಕೆ? ಬಡವಂಗೆ
ನಾಡುಮಾತೇಕೆ? ಸರ್ವಜ್ಞ ॥ ೧೯

ಅಬ್ಬರಿಸಿಕೂಗೇಕೆ? ಕಬ್ಬೇಕೆಬೋಡನಿಗೆ?
ನಿಬ್ಬಣವೇಕೆಕುರುಡನಿಗೆ? ವನದೊಳಗೆ
ಹೆಬ್ಬುಲಿಯದೇಕೆ? ಸರ್ವಜ್ಞ ॥ ೨೦ ॥

ಆನೆಗಂದಣವೇಕೆ? ಶ್ವಾನಂಗೆಸೊಬಗೇಕೆ?
ಗಾಣಹೂಡುವಗೆಮುಡಿಯೇಕೆ? ಕುರುಡಂಗೆ
ಆನಂದವೇಕೆ? ಸರ್ವಜ್ಞ ॥ ೨೧ ॥

ಉಂಡುಕೊಂಡಿರಹೊಲ್ಲ । ಕೊಂಡವರಕೆಳೆಹೊಲ್ಲ
ಮಂಡೆಯಲಿಹೊರೆಯುಹೊರಹೊಲ್ಲ । ರಾಜಂಗೆ
ಕೊಂಡೆಯುವೆಹೊಲ್ಲ ಸರ್ವಜ್ಞ ॥ ೨೨ ॥
ಮಗಳಮಕ್ಕಳುಹೊಲ್ಲ । ಹಗೆಯರಾಕೆಳೆಹೊಲ್ಲ
ಜಗಳವಾಡುವರನೆರೆಹೊಲ್ಲ । ಮೂಗಿಗೆ
ನೆಗಡಿತಾಹೊಲ್ಲ ಸರ್ವಜ್ಞ ॥ ೨೩ ॥
ನುಚ್ಚನ್ನವುಣಹೊಲ್ಲ । ಮತ್ಸರನಕೆಳೆಹೊಲ್ಲ
ಕುತ್ಸದಿಂನುಡಿವಮಗಹೊಲ್ಲ । ಒಡೆಯಂಗೆ
ಮುಚ್ಚುಗಣ್ಣೊಲ್ಲ ಸರ್ವಜ್ಞ ॥ ೨೪ ॥
ಹರಳುಹಾದಿಗೆಹೊಲ್ಲ । ಹುರುಡೊಲ್ಲಹುಲಿಯೊಡನೆ
ತಿರುಳುಕೈಸೂರೆಯಿಡಲೊಲ್ಲ । ತೊತ್ತಿಗೆ
ಕುರುಳುತಾಹೊಲ್ಲ ಸರ್ವಜ್ಞ ॥ ೨೫ ॥
ಉಪ್ಪಿಲ್ಲದುಣಹೊಲ್ಲ । ಮುಪ್ಪುಬಡತನಹೊಲ್ಲ
ತಪ್ಪಾದನುಡಿಯುಸತಿಹೊಲ್ಲ । ಹಾದಿಯಲಿ
ಸರ್ಪವಿರಹೊಲ್ಲ ಸರ್ವಜ್ಞ ॥ ೨೬ ॥
ಬೋಳುದಲೆಯಿರಹೊಲ್ಲ । ಕೀಳನೊಳುಇರಸಲ್ಲ
ಹೇಳದೌತನಕೆಬರಹೊಲ್ಲ । ಕೊಂಡೆಯರ
ಗಾಳಿತಾಹೊಲ್ಲ ಸರ್ವಜ್ಞ ॥ ೨೭ ॥
ಅಗಡೆತ್ತಕೊಳಹೊಲ್ಲ । ಜಗಳವಾಡಲುಹೊಲ್ಲ
ಪಗಡೆಯಾಡುವನಕೆಳೆಹೊಲ್ಲ । ಸಜ್ಜನರ
ನಗಲುವುದುಹೊಲ್ಲ ಸರ್ವಜ್ಞ ॥ ೨೮ ॥
ಮೋಟೆತ್ತಕೊಳಹೊಲ್ಲ । ಮೋಟುಗಾರಿಕೆಹೊಲ್ಲ
ತಾಟಗಿತ್ತಿಯರನೆರೆಹೊಲ್ಲ । ಕಜ್ಜಿಯ
ಕಾಟವೇಹೊಲ್ಲ ಸರ್ವಜ್ಞ ॥ ೨೯ ॥
ಇದ್ದೂರುಹಗೆಹೊಲ್ಲ । ಕದ್ದು ಹೊರೆಯುಲುಹೊಲ್ಲ
ತಿದ್ದದಾಎತ್ತತರಹೊಲ್ಲ । ಮನೆಯೊಳಗೆ
ಗುದ್ದಾಟಹೊಲ್ಲ ಸರ್ವಜ್ಞ ॥ ೩೦ ॥

ನೆರಿಕೆಯಾಮನೆಹೊಲ್ಲ । ಕರಿಯವಸ್ತ್ರವುಹೊಲ್ಲ
ಕರೆಕರೆಯಕೂಳುತಿನಹೊಲ್ಲ । ಕಜ್ಜಿಯ
ಕೆರೆದುಕೊಳಹೊಲ್ಲ ಸರ್ವಜ್ಞ ॥ ೩೧ ॥
* * * * ॥ ೩೨-೩೫ ॥
ಗೋಟಡಕೆಮೆಲಹೊಲ್ಲ । ಭಾಟಿಯೊಳಗಿರಸಲ್ಲ
ಕೂಟವನುಮುರಿವಕೆಳೆಹೊಲ್ಲ । ಹೆಣ್ಣಿಗೆ
ತಾಟಕವುಹೊಲ್ಲ ಸರ್ವಜ್ಞ ॥ ೩೬ ॥
ಹರಿಹಾವಹಿಡಿಹೊಲ್ಲ । ಹರುಕರಾಕೆಳೆಹೊಲ್ಲ
ತೊರೆಯೊಳಂಬಿಗನಹಗೆಹೊಲ್ಲ । ಆಟದೊಳು
ನೆರೆಮೋಸಸಲ್ಲ ಸರ್ವಜ್ಞ ॥ ೩೭ ॥
ಆಡಿಹುಸಿಯಲುಹೊಲ್ಲ । ಕೂಡಿತಪ್ಪಲುಹೊಲ್ಲ
ಕಾಡುವಾನೆಂಟಬರಹೊಲ್ಲ । ಧನಹೀನ
ನಾಡಲೇಹೊಲ್ಲ ಸರ್ವಜ್ಞ ॥ ೩೮ ॥
ಬಾಗದಾಬಿಲುಹೊಲ್ಲ । ಆಗದಾ ಮಗಹೊಲ್ಲ
ಆಗೀಗಲೆಂಬನುಡಿಸಲ್ಲ । ರಣಕೆಯಿದಿ
ರಾಗದವಹೊಲ್ಲ ಸರ್ವಜ್ಞ ॥ ೩೯ ॥
ಅರಿವುದುಷ್ಟಗೆಹೊಲ್ಲ । ಕುರಿಯಬೆದರಿಸಸಲ್ಲ
ಅರಿಯದಾಊರೊಳಿರಹೊಲ್ಲ । ದೊರೆಗಳಿಗೆ
ಸರಸತಾಸಲ್ಲ ಸರ್ವಜ್ಞ ॥ ೪೦ ॥
ದಾಸಿಯೆಂಜಲುಹೊಲ್ಲ । ವಿಾಸೆಮುರಿಯಲುಹೊಲ್ಲ
ಬಾಸರಿಸಿಕೊಂಬಸತಿಹೊಲ್ಲ । ವಿಷಯದ
ಆಸೆಯೇಹೊಲ್ಲ ಸರ್ವಜ್ಞ ॥ ೪೧ ॥
ಅಕ್ಕಿಬೋನವೆಲೇಸು । ತಕ್ಕವರಕೆಳೆಲೇಸು
ಮಕ್ಕಳತೊದಲ್ನುಡಿಯೆಲೇಸು । ಲೋಕಕ್ಕೆ
ಒಕ್ಕಲೇಲೇಸು ಸರ್ವಜ್ಞ ॥ ೪೨ ॥
ವೀಳ್ಯವಿಲ್ಲದಮುಖವು । ಬಾಳುವೆಯೆಕೆಟ್ಟಂತೆ
ಬಾಳೆಗಳಿಲ್ಲದೆಲೆತೋಟ । ಪಾತ್ರದ
ಮೇಳಮುರಿದಂತೆ ಸರ್ವಜ್ಞ ॥ ೪೩ ॥

ಅಡಕೆಯಿಲ್ಲದಬಾಯಿ । ಕಡುಕನಿಕ್ಕದಕಿವಿಯು
ಅಡಕವಿಲ್ಲದನಮನೆವಾರ್ತೆ । ಇವುಮೂರು
ಮಡಕೆಯೊಡೆದಂತೆ ಸರ್ವಜ್ಞ ॥ ೪೪ ॥

ಸುಣ್ಣವಿಲ್ಲದವೀಳ್ಯ । ಬಣ್ಣವಿಲ್ಲದಮದುವೆ
ಹೆಣ್ಣಿಲ್ಲದವನಸಂಸಾರ । ಮಳಲೊಳಗೆ
ಎಣ್ಣೆಹೊಯ್ದಂತೆ ಸರ್ವಜ್ಞ ॥ ೪೫ ॥

ಕಾಚುಯಿಲ್ಲದವೀಳ್ಯ । ಕೂಚುಯಿಲ್ಲದದಂಡು
ಆಚಾರವಿಲ್ಲದನಮನೆಯು । ಇವುಮೂರು
ನಾಚಿಕೊಂಡಂತೆ ಸರ್ವಜ್ಞ ॥ ೪೬ ॥

ದಂಡಿಗಿಲ್ಲದರಾಗ । ಕುಂಡವಿಲ್ಲದಹೋಮ
ಹೆಂಡಿರಿಲ್ಲದನಬಗತನವು । ತಲೆಹೋಗಿ
ಮುಂಡವಿದ್ದಂತೆ ಸರ್ವಜ್ಞ ॥ ೪೭ ॥

ಅರಸನಿಲ್ಲದರಾಜ್ಯ । ಹೊರಸುಯಿಲ್ಲದನಿದ್ರೆ
ಪುರುಷನಿಲ್ಲದಳಸಂಸಾರ । ವೈಲಿಗೆಯ
ನೊರಸಿಬಿಟ್ಟಂತೆ ಸರ್ವಜ್ಞ ॥ ೪೮ ॥

ಹಾಲುಇಲ್ಲದಊಟ । ಬಾಲೆಯರಬಿರುನೋಟ
ಕಾಲಿಲ್ಲದವನಹರಿದಾಟ । ಹೆಡತಲೆಯ
ಕೋಲುಕೊಂಡಂತೆ ಸರ್ವಜ್ಞ ॥ ೪೯ ॥

ಕಳ್ಳನಾಗಿರಹೊಲ್ಲ । ಮುಳ್ಳುಕಾಲಿಗೆಹೊಲ್ಲ
ಕೊಳ್ಳಿಯಾಬೆಳಕಿಲುಣಸಲ್ಲ । ಬಡವತಾ
ಕುಳ್ಳಿರಲುಹೊಲ್ಲ ಸರ್ವಜ್ಞ ॥ ೫೦ ॥

ಸಾಲಬಡವಗೆಹೊಲ್ಲ । ಸೋಲಜೂಜಿಗೆಹೊಲ್ಲ
ಬಾಲೆಯರಬೆನ್ನಿಲಿರಹೊಲ್ಲ । ಬಡವನ
ಓಲಗವೆಹೊಲ್ಲ ಸರ್ವಜ್ಞ ॥ ೫೧ ॥

ದಾರಿಯಾಮನೆಹೊಲ್ಲ । ಜಾರೆಯರನೆರೆಹೊಲ್ಲ
ಊರುಕಾಯುವನಹಗೆಹೊಲ್ಲ । ಮನೆಯೊಳಗೆ
ಹೋರಾಟಹೊಲ್ಲ ಸರ್ವಜ್ಞ ॥ ೫೨ ॥

ಮೊಸರಿಲ್ಲದಾಊಟ । ಕೆಸರಿಲ್ಲದಿಹಗದ್ದೆ
ಹಸನಿಲ್ಲದಿರ್ಪಸಂಸಾರ । ಶ್ರಾವಣದ
ಬಿಸಿಲುಕಾದಂತೆ ಸರ್ವಜ್ಞ ॥ ೫೩ ॥

ತುಪ್ಪವಿಲ್ಲದಊಟ । ಒಪ್ಪವಿಲ್ಲದಹೆಣ್ಣು
ತಪ್ಪಲಾಗೆಡ್ಡೆ ಕೊನೆಕಬ್ಬು । ಇವುನಾಲ್ಕು
ಸಪ್ಪೆಕಾಣಯ್ಯ ಸರ್ವಜ್ಞ ॥ ೫೪ ॥

ಆಸೆಯಿಲ್ಲದಊಟ । ಮೀಸೆಯಿಲ್ಲದಮೋರೆ
ವಾಸನೆಯಮುಡಿಯದಿಹತುರುಬು । ಇವುಮೂರು
ಲೇಸಲ್ಲವೆಂದ ಸರ್ವಜ್ಞ ॥ ೫೫ ॥

ತೊಗೆಯುಯಿಲ್ಲದಊಟ । ಅಗತೆಯಿಲ್ಲದತೋಟ
ನಗೆಯಿಲ್ಲದವರಒಡನಾಟ । ತೂತಿನ
ಮೊಗೆಯಂತೆಕಾಣೊ ಸರ್ವಜ್ಞ ॥ ೫೬ ॥

ರೊಟ್ಟೆಯಿಲ್ಲದಊಟ । ಕಟ್ಟೆಯಿಲ್ಲದಮರನು
ಹೆಟ್ಟುಗೆಯರಿಲ್ಲದರಮನೆಯು । ಚಂದನವ
ಕುಟ್ಟಿಕುಡಿದಂತೆ ಸರ್ವಜ್ಞ ॥ ೫೭ ॥

ಮೋಡಿಯಿಲ್ಲದಬಿಲ್ಲು । ಕೋಡಿಯಿಲ್ಲದಕೆರೆಯು
ಬೇಡಂಗೆಮಾಡಿದುಪಕಾರ । ಇವುಮೂರು
ಕೇಡುಕಾಣಯ್ಯ ಸರ್ವಜ್ಞ ॥ ೫೮ ॥

ಆಸರಿಲ್ಲದನಿದ್ದೆ । ಪೂಸರಿಲ್ಲದಮೀಹ
ಭಾಷೆಯಿಲ್ಲದನಕೆಳೆತನವು । ಮೋಟ ಕೈ
ಬೀಸಿಕರೆದಂತೆ ಸರ್ವಜ್ಞ ॥ ೫೯ ॥

ಕೋಳಿಯನುಹಂದಿಯನು । ಮೇಳದಿಂದಲಿಸಾಕಿ
ಆಳುತ್ತಕಡಿದುಬಡಿತಿಂಬ । ಪಾಪಿಗಳ
ಮೇಳವೇನರಕ ಸರ್ವಜ್ಞ ॥ ೬೦ ॥

ತಾಯಮುಂದಣಶಿಶುವ । ತಾಯನಗಲಿಸಿಕೊಲ್ಲೆ
ತಾಯಿಯನುಮಗುವಕೊಲ್ಲುವನು । ಅವತನ್ನ
ತಾಯಕೊಂದಂತೆ ಸರ್ವಜ್ಞ ॥ ೬೧ ॥

ಸಾದವಮಾದಿಗರೆಂಬ । ಭೇದಗಳನಿಡಬೇಡ
ಮಾದಿಗನುತಿಂಬಪಶುವನ್ನು । ಸಾದ ತನ
ಗಾದವರತಿಂಬ ಸರ್ವಜ್ಞ ॥ ೬೨ ॥
ಸತ್ತಿತ್ತಹೊರುವವನು । ಉತ್ತಮದವಾದಿಗನು
ಸತ್ತಕತ್ತೆಯನುಅರ್ಥಿಯಲಿ । ಹೊರುವವನು
ಎತ್ತಣವನ್ನೆಯ ಸರ್ವಜ್ಞ ॥ ೬೩ ॥

* * * * ॥ ೬೪—೬೯ ॥

ಗವುಡನೊಳುಹಗೆತನವು । ಕಿವುಡನೊಡನೇಕಾಂತ
ತವುಡಿನಾಅಡಿಗೆಯುಣ್ಣುವುದು । ಇವುಮೂರು
ಅವುಡೆ (?) ಯಂತಕ್ಕು ಸರ್ವಜ್ಞ ॥ ೭೨ ॥
ಕೆಟ್ಟಹಾಲಿಗಿಂತ । ಹಿಟ್ಟನಾತಿಳಿಲೇಸು
ಕೆಟ್ಟುಬದುಕಿದನಕೆಳೆಗಿಂತ । ಕಾಡಿನ
ಬೆಟ್ಟವೇಲೇಸು ಸರ್ವಜ್ಞ ॥ ೭೩ ॥

## ೨೮. ವಿಟಗಾತಿಯರ ಪದ್ಧತಿ.

ಅರಳಿಗೇಹೂವಿಲ್ಲ । ಕುರುಳುಕೋಡಗಕಿಲ್ಲ
ದುರುಳರಿಗೆ ಕಲಿಸುವವರಿಲ್ಲ । ಸೂಳೆಗೆ
ಮರುಕವೇ ಇಲ್ಲ ಸರ್ವಜ್ಞ ॥ ೧ ॥
ಅತ್ತಿಮರಕರಳಿಲ್ಲ । ಕತ್ತೆಗಾ ಕೋಡಿಲ್ಲ
ಬತ್ತಿದ ಕೆರೆಗೆ ತೆರೆಯಿಲ್ಲ । ಸೂಳೆಗೆ
ಸತ್ಯವೇ ಇಲ್ಲ ಸರ್ವಜ್ಞ ॥ ೨ ॥
ಆಲಕ್ಕೆ ಹೂವಿಲ್ಲ । ಸಾಲಕ್ಕೆ ಕೊನೆಯಿಲ್ಲ
ಕಾಲಿಲ್ಲದವಗೆ ನಡೆಯಿಲ್ಲ । ಸೂಳೆಗೆ
ಶೀಲವೇ ಇಲ್ಲ ಸರ್ವಜ್ಞ ॥ ೩ ॥

* * * * ॥ ೪—೯ ॥

ಹದ್ದು ಹಾವನುನುಂಗೆ । ಮುದ್ದುಕುತ್ತವನುಂಗೆ
ನಿದ್ದೆಯನುನುಂಗಿ ಸೂಳೆ । ತನ್ನನ್ನು
ಹೊದ್ದಿದರನುಂಗು ಸರ್ವಜ್ಞ ॥ ೧೦ ॥

ಬಿಕ್ಕಿಬಿಕ್ಕಿಯಳುತ್ತ । ಲಿಕ್ಕುವಳು ಕಣ್ಣೀರ
ಸಿಕ್ಕಿದಳು ಸೂಳೆಯೆನಬೇಡ। ರೊಕ್ಕವನು
ತೆಕ್ಕೊಂಬತನಕ ಸರ್ವಜ್ಞ ॥ ೧೧ ॥
ಹರಿಗೋಲುಸೂಳೆಯಾ । ತೆರನೆರಡು ಪೊಂದೈಯ
ಹರಿಗೋಲುದಡಕೆ ಸೇರಿವರೆ। ಮತ್ತೊಬ್ಬ
ನೆರಗಿಹತ್ತುವನು ಸರ್ವಜ್ಞ ॥ ೧೨ ॥
ಹದ್ದಿಗಲ್ಲಣವೇಕೆ ? ಗುದ್ದಲಿಗೆ ಪೊರೆಯೇಕೆ ?
ಇದ್ದಲಿಗೆ ಬಿಳುಪುತಾನೇಕೆ ? ಸೂಳೆಗೆ
ನಿದ್ದೆಗಣ್ಣೇಕೆ ? ಸರ್ವಜ್ಞ ॥ ೧೩ ॥
ಒಕ್ಕಲಿಗೆ ಊರಾಸೆ। ಮಕ್ಕಳಿಗೆ ತಾಯಾಸೆ
ಜಕ್ಕವಕ್ಕಿಗೆ ಕೊಳದಾಸೆ। ಸೂಳೆಗೆ
ರೊಕ್ಕದೊಳಗಾಸೆ ಸರ್ವಜ್ಞ ॥ ೧೪ ॥
ಒಡೆದಕಣ್ಬಂದರೆ। ಸಿಡಿಲೆರಗಿ ಬದುಕಿದರೆ
ನಡುಗಡಲ ಮುಳುಗಿವುಳಿಯುವರೆ। ಸೂಳೆಯ
ನುಡಿಯನೆಚ್ಚುವುದು ಸರ್ವಜ್ಞ ॥ ೧೫ ॥
ಮಳೆಗೆಹಂದರಹೊಲ್ಲ। ಗಿಳಿಗೆಬಾವುಗ ಹೊಲ್ಲ
ಸುಳಿಗಾಳಿಹೊಲ್ಲ ಸೊಡರಿಂಗೆ। ಸೂಳೆಗೆ
ದಳೆಗಾಲು ಹೊಲ್ಲಸರ್ವಜ್ಞ ॥ ೧೬ ॥
ಮಳೆಗೆ ಮಂಟಪಲೇಸು। ಗಿಳಿಗೆಪಂಜರಲೇಸು
ಸುಳಿಗಾಳಿಲೇಸು ಬೆವರಿಂಗೆ। ಸೂಳೆಗೆ
ಗಳಿಸುವುದೆಲೇಸು ಸರ್ವಜ್ಞ ॥ ೧೭ ॥

* * * * ॥ ೧೮—೪೨ ॥

## ೨೯. ಬೆಡಗಿನ ಪದ್ಧತಿ.

ಕಲ್ಲರಳಿಹೂವಾಗಿ। ಎಲ್ಲರಿಗೆ ಬೇಕಾಗಿ
ಮಲ್ಲಿಕಾರ್ಜುನ ಶಿಖರಬೆಳಕಾಗಿ। ಇದರರ್ಥ
ಬಲ್ಲವರು ಹೇಳಿ ಸರ್ವಜ್ಞ ॥ ೧ ॥

ಮರನೊತ್ತಿ ಬೇಯುವುದು । ಉರಿತಾಕಿ ಬೇಯುವುದು
ಪುರಗಳನು ನುಂಗಿ ಬಗುಳುವುದು । ಲೋಕದಲಿ
ನರನಿದೇನೆಂಬ ಸರ್ವಜ್ಞ ॥ ೨ ॥
ಉರಿಬಂದು ಬೇಲಿಯನು । ಹರಿದುಹೊಕ್ಕುದು ಕಂಡೆ
ಅರಿದಿದುಬಗೆಗೆ ಕವಿಕುಲದ । ಶ್ರೇಷ್ಠರೆ
ಲ್ಲರಿತಿದನುಪೇಳಿ ಸರ್ವಜ್ಞ ॥ ೩ ॥
ಕಾಲಿಲ್ಲದಲೆ ಹರಿಗು । ತೋಳಿಲ್ಲದಲೆ ಹೊರುಗು
ನಾಲಿಗಿಲ್ಲದೆಯೆ ಉಲಿಯುವುದು । ಕವಿಕುಲದ
ಮೇಲುಗಳೆಪೇಳಿ ಸರ್ವಜ್ಞ ॥ ೪ ॥
ಇರಿದರೆಯು ಯೇರಿಲ್ಲ । ಹರಿದರೆಯು ಸೀಳಿಲ್ಲ
ತಿರುಗೂಳಗೊಂಡರುಣಲಿಲ್ಲ । ಕವಿಗಳಿರ
ಅರಿದಿದನು ಹೇಳಿ ಸರ್ವಜ್ಞ ॥ ೫ ॥
ಆಡಿದರೆ ಆಡುವುದು । ಓಡಿಮರನೇರುವುದು
ಕೂಡದೇಕೊಂಕಿ ನಡೆಯುವುದು । ಕಡಿದರದು
ಬಾಡದದಹೇಳಿ ಸರ್ವಜ್ಞ ॥ ೬ ॥
ಕತ್ತಿಕ್ಕೆಹುರಿಸುತ್ತಿ । ಬತ್ತಿಯಂತುಳಿವುದು
ಕಿತ್ತುಬೀಸಾಡೆ ನಡೆಯುವುದು । ಕವಿಜನರೆ
ಅರ್ಥಿಯಿಂಹೇಳಿ ಸರ್ವಜ್ಞ ॥ ೭ ॥
ಕಚ್ಚಿದರೆಕಚ್ಚುವುದು । ಕಿಚ್ಚಲ್ಲಚೇಳಲ್ಲ
ಅಚ್ಚರಿಯಲ್ಲ ಅರಿದಲ್ಲ । ಈಮಾತು
ನಿಶ್ಚಯವೆಲ್ಲ ಸರ್ವಜ್ಞ ॥ ೮ ॥
ಹತ್ತುಸಾವಿರಕಣ್ಣು । ನೆತ್ತಿಯೊಳಗುರುಬಾಲ
ಹುತ್ತಿನಹುಳುವಹಿಡಿಯುವುದು । ಕವಿಜನರ
ವೊತ್ತವಿದ ಹೇಳಿ ಸರ್ವಜ್ಞ ॥ ೯ ॥
ತನ್ನಸುತ್ತಲುಮಣೆಯು । ಬೆಣ್ಣೆಕುಡಿವಾಲುಗಳು
ತಿನ್ನದೇಹಿಡಿದುತರುತಿಹುವು । ಕವಿಗಳಿದ
ನನ್ನಿಯಿಂಹೇಳಿ ಸರ್ವಜ್ಞ ॥ ೧೦ ॥

ಬಟ್ಟಲಿನಬಾಯಂತೆ । ಹುಟ್ಟುವುದು ಲೋಕದೊಳು
ಮುಟ್ಟುವುದು ತನ್ನಹೆಂಡಿರನು । ಕವಿಗಳೊಳು
ಧಿಟ್ಟರಿದಹೇಳಿ ಸರ್ವಜ್ಞ ॥ ೧೧ ॥
ಹಲ್ಲುನಾಲಗೆಯಿಲ್ಲ । ಸೊಲ್ಲುಸೋಜಿಗವಲ್ಲ
ಕೊಲ್ಲದೇಮೃಗವಹಿಡಿಯುವುದು । ಲೋಕದೊಳ
ಗೆಲ್ಲತಾವಿನಲಿ ಸರ್ವಜ್ಞ ॥ ೧೨ ॥
ಆಸನದಲುಂಬುವುದು । ಸೂಸುವುದು ಬಾಯಲ್ಲಿ
ಬೇಸರದೆಹೊತ್ತುಕೊಳ್ಳುವುದು । ಕವಿಗಳೊಳು
ಸಾಸಿಗರುಪೇಳಿ ಸರ್ವಜ್ಞ ॥ ೧೩ ॥
ಹಲವುಮಕ್ಕಳತಂದೆ । ತಲೆಯಲ್ಲಿಜುಟ್ಟುವಗೆ
ಸಲೆಗಳಿಗೆ ಜಾವವರಿವವನ । ಹೆಂಡತಿಗೆ
ಮೊಲೆಯಿಲ್ಲನೋಡು ಸರ್ವಜ್ಞ ॥ ೧೪ ॥
ಮಲ್ಲಿಗೆಗೆ ಹುಳಿಯಕ್ಕು । ಕಲ್ಲಿಗೆಗಂಟಕ್ಕು
ಹಲ್ಲಿಗೆನೊಣನುಸವಿಯಕ್ಕು । ಕನ್ನಡದ
ಸೊಲ್ಲುಗಳನೋಡು ಸರ್ವಜ್ಞ ॥ ೧೫ ॥
ಅಣಿಯನೋಡಿದನೊಬ್ಬ । ಮಣೆಯಮಾಡಿದನೊಬ್ಬ
ಕುಣಿದಾಡಿಸುವವತಾನೊಬ್ಬ । ಸನ್ನೆಯಲಿ
ಹೆಣವಾರುತೈತೆ ಸರ್ವಜ್ಞ ॥ ೧೬ ॥
ಎಂಟುಬಳ್ಳದನಾಮ । ಗಂಟಲಲಿ ಮುಳ್ಳುಂಟು
ಬಂಟರನು ಹಿಡಿದು ಬಡಿಸುವುದು । ಕವಿಯೆಂಬ
ತೋಂಟರಿದಹೇಳಿ ಸರ್ವಜ್ಞ ॥ ೧೭ ॥
ಬಂದೇನುಮುತ್ತೊಮ್ಮೆ । ಬಂದೇನು ಹೋದೇನು
ನಿಂದೇನುನಿಂದು ಇರಲೊಲ್ಲೆ । ಹೋದೇನು
ಬಂದೇನುಬಾರೆ ಸರ್ವಜ್ಞ ॥ ೧೮ ॥
ಕಚ್ಚಿದೊಡೆಉರಿಯುವುದು । ಕಿಚ್ಚುಕೊಳ್ಳಿಗಳಲ್ಲ
ಅಚ್ಚರಿಯಲ್ಲ ಅರಿದಲ್ಲ । ಈಮಾತು
ನಿಶ್ಚಯವೆಲ್ಲ ಸರ್ವಜ್ಞ ॥ ೧೯ ॥

ಕಡೆಕಪ್ಪುನಡುಬಿಳಿದು । ಉಡುವವಸ್ತ್ರವದಲ್ಲ
ಬಿಡದೆನೀರುಂಟು ಮಡುವಲ್ಲ । ಕವಿಗಳೀ
ಬೆಡಗುಪೇಳುವುದು ಸರ್ವಜ್ಞ ॥ ೨೦ ॥
ಮೂರು ಕಾಲಲಿ ನಿಂತು । ಗೀರಿತಿಂಬುದು ಮರನ
ಆರಾರೆನೀರು ಕುಡಿಯುವುದು । ಕವಿಯೆಂಬ
ಧೀರರಿದಹೇಳಿ ಸರ್ವಜ್ಞ ॥ ೨೧ ॥
ಒಣಗಿದಾಮರ ಚಿಗುತು । ಬಿಣಲುಬಿಡುವುದು ಕಂಡೆ
ತಣಿಗೆಯಾಸ್ಥಾನಕ್ಕೆ ಬಹುದು । ಕವಿಯೆಂಬ
ಗುಣಯುತರು ಪೇಳಿ ಸರ್ವಜ್ಞ ॥ ೨೨ ॥
ನೆತ್ತಿಯಲಿಉಂಬುದು । ಸುತ್ತಲೂ ಸುರಿಯುವುದು
ಎತ್ತಿದರೆ ಎರಡುಹೋಳಹುದು । ಕವಿಗಳಿದ
ರರ್ಥವನು ಹೇಳಿಸರ್ವಜ್ಞ ॥ ೨೩ ॥
ಅರೆಯಕಲ್ಲಿನಮೇಲೆ । ಮರಮೂಡಿದುದಕಂಡೆ
ಮರದಮೇಲೆರಡು ಕೈಕಂಡೆ । ಚೆನ್ನಾಗಿ
ಇರುವುದನು ಕಂಡೆ ಸರ್ವಜ್ಞ ॥ ೨೪ ॥
ಹತ್ತುಸಾವಿರಕಣ್ಣು । ನೆತ್ತಿಯಲಿತಾಬಾಲ
ಹತ್ತೆಂಟುಮಿಕವ ಹಿಡಿಯುವುದು । ಕವಿಗಳಿದ
ರರ್ಥವನುಪೇಳಿ ಸರ್ವಜ್ಞ ॥ ೨೫ ॥
ಕೆನ್ನೆಯಲಿಕುಡಿವಾಲ । ತನ್ನಸುತ್ತಲುಮಣಿಯು
ತನ್ನದೇಹವನೆಹರಡುವುದು । ಕವಿಯೆಂಬ
ಚನ್ನರಿದಹೇಳಿ ಸರ್ವಜ್ಞ ॥ ೨೬ ॥
ಮುಂಗೈಯೊಳಾಡುವುದು । ಹಿಂಗುವುದು ಹಿಗ್ಗುವುದು
ಸಿಂಗಿಯಲಿ ಸೀಲಬಿಡುತಿಹುದು । ಆಮಿಕದ
ಭಂಗವನು ನೋಡಿ ಸರ್ವಜ್ಞ ॥ ೨೭ ॥
ಹತ್ತುತ್ತಲದೆಕೆಂಪು । ಮತ್ತಾರುತಲೆಕಪ್ಪು
ಹೆತ್ತಪ್ಪನೊಡಲನುರಿಸುವುದು । ಕವಿಗಳಿದ
ರರ್ಥವನು ಪೇಳಿ ಸರ್ವಜ್ಞ ॥ ೨೮ ॥

ಅರಮನೆಯಲಿರ್ಪುದದು । ಕರೆವಲ್ಲಿ ಬರುತಿಹುದು
ತರಿವುದದು ತನ್ನ ಬಳಗವನು । ಕವಿಗಳಿದ
ನರುಹುವುದು ಬೇಗ ಸರ್ವಜ್ಞ ॥ ೨೯ ॥
ಧರೆಯೊಳಗೆ ಹುಟ್ಟಿಯಂ । ಬರದೊಳಗೆ ಓಡುವುದು
ದೊರೆಯುತ್ತ ಕಿಡಿಯನುಗುಳುವುದು । ಕವಿಯೆಂಬ
ನೆರೆಜಾಣ ಪೇಳು ಸರ್ವಜ್ಞ ॥ ೩೦ ॥
ಇಂತ ಅಂಬಲಿಯೊಳಗೆ । ನಿಂತಿರ್ಪನಿವನಾರು ?
ಅಂತಕನಲ್ಲ ಅಜನಲ್ಲ । ಅಂಬಲಿಯ
ನೆಂತುಂಬನಯ್ಯ ಸರ್ವಜ್ಞ ॥ ೩೧ ॥
ಸಂದಮೇಲ್ಸುಡುವುದದು । ಬೆಂದಮೇಲುರಿಯುವುದು
ಬಂಧುಗಳನೆದ್ದು ಬಡಿಯುವುದು । ನೀವಿದರ
ದಂದುಗವನೋಡಿ ಸರ್ವಜ್ಞ ॥ ೩೨ ॥
ಅಟ್ಟರೂ ಆದರಣೆ । ಸುಟ್ಟರೂ ಕುಂಟಿನಿಯು
ಇಟ್ಟಗೆಯ ಮೂಗನರಿದರು । ಮೂರುಭವ
ಕಟ್ಟಿಕೂಡುವುವು ಸರ್ವಜ್ಞ ॥ ೩೩ ॥
* * * * ॥ ೩೪—೩೬ ॥

## ೩೦. ಮಿಶ್ರಪದ್ಯಗಳು.

ಸೃಷ್ಟಿಯೆಲ್ಲವನುಮನ । ಮುಟ್ಟುವದು ನಿಮಿಷಕ್ಕೆ
ನೆಟ್ಟಭಾವನೆಯು ಲಿಂಗ । ಮೂರೊಂದಿ
ಶ್ರೇಷ್ಠ ತಾನಹನು ಸರ್ವಜ್ಞ ॥ ೧ ॥
ಕಟ್ಟಿಬಿಟ್ಟಲು ಶಿವನು । ಕೊಟ್ಟ ಕರ್ತನೆ ನಾನು
ಕಟ್ಟಿದ ಲಿಂಗ ಭಜಿಸಿದೊಡೆ । ಆವಾಗ
ಬಟ್ಟಬಯಲಕ್ಕು ಸರ್ವಜ್ಞ ॥ ೨ ॥
ಅಂಗವನು ಲಿಂಗವನು । ಸಂಗೊಳಿಸಲೆಂತಕ್ಕು
ಲಿಂಗದಲಿ ನೆನಹು ಘನವಾಗೆ । ಆ ಲಿಂಗ
ಅಂಗ ತಾನಕ್ಕು ಸರ್ವಜ್ಞ ॥ ೩ ॥

ಹಲವನೋದಿದೊಡೇನು ? ಚಲುವನಾದೊಡದೇನು ?
ಕುಲವಂತನಾಗಿಫಲವೇನು ? ಲಿಂಗದ
ವೊಲುಮೆಯಿಲ್ಲದವ ಸರ್ವಜ್ಞ ॥ ೪ ॥
ಪುಸಿವನ ವ್ಯವಹಾರ । ಕಸಹತ್ತಿದಾರಂಬ
ವಿಷಯವುಳ್ಳವನಗುರುತನವು । ಇವುಮೂರು
ಮಸಿವಣ್ಣಕಂಡ್ಯಾ ಸರ್ವಜ್ಞ ॥ ೫ ॥
ಕತ್ತೆಯಕಿವಿಯಂತೆ । ಬಿತ್ತಾರುಬೆಳೆದಾರು
ವೊತ್ತೊತ್ತಿಹೊಗೆಯಕುಡಿದಾರು । ಜಗವೆಲ್ಲ
ಕತ್ತೆಯೆಂದಾರು ಸರ್ವಜ್ಞ ॥ ೬ ॥
ಕುಂಡಲಿಯಭೇದದ । ಗುಂಡನಾಳದ ನಡುವೆ!
ಮಂಡಲಿಸುತಿರ್ಪ ಹಂಸನ । ಹತ್ತಿರ
ಕಂಡಿರ್ಪಸುಳಿವು ಸರ್ವಜ್ಞ ॥ ೭ ॥
ಕುಂಡಲಿಯಸರ್ಪವನು । ಉಂಡಲ್ಲಿಯಲ್ಲವೇ !
ಮಂಡಲವುಮೂರು ತನಗಕ್ಕು । ಕಾಲನಿಗೆ
ಗಂಡತಾನಕ್ಕು ಸರ್ವಜ್ಞ ॥ ೮ ॥
ಮುತ್ತೊಡೆದುಹತ್ತಿಕ್ಕು । ಮುತ್ತಾನೆಸತ್ತಿಕ್ಕು
ಹುತ್ತವನೇರಿನರಿಕೂಗೆ । ಲೋಕಕ್ಕೆ
ಕತ್ತಲೋಡಿತ್ತು ಸರ್ವಜ್ಞ ॥ ೯ ॥
ಉತ್ತುಂಗಮಾಣಿಕದ । ಭಿತ್ತಿಮಂಟಪದೊಳಗೆ
ನಿತ್ಯನಿರ್ಮಲದನಿಜಕಂಡ । ಯೋಗಿಗೆ
ಯೆತ್ತಣಸಾವು? ಸರ್ವಜ್ಞ ॥ ೧೦ ॥
ಆತ್ಮದಾಲಿಂಗವನು । ಪ್ರೀತಿಯಿಂದರಿತೊಡೆ
ಸೂತಕವಿಲ್ಲ ಭಯವಿಲ್ಲ । ಪಂಚಮಹ
ಪಾತಕವೆಯಿಲ್ಲ ಸರ್ವಜ್ಞ ॥ ೧೧ ॥
ನಾದದಾಬಳಿವಿಡಿದು । ಎಯ್ದಿಸೈಪರಮನನು
ಆದಿಯನರಿದು ಸುಖಿಯಾಗು । ನೀ ಯಮನ
ಹಾದಿಗೊಳಬೇಡ ಸರ್ವಜ್ಞ ॥ ೧೨ ॥

ಯೆಲ್ಲದರಆಶೆಬಿ । ಟ್ಟಲ್ಲಿಯೇ ಕೈಲಾಸ
ಯೆಲ್ಲವನುಬಯಸಿತಾ ಭ್ರಮಿಸಿ । ದೊಡೆನರಕ
ಅಲ್ಲಿಯೇನೋಡು ಸರ್ವಜ್ಞ ॥ ೧೩ ॥
ಅರುವತ್ತುಸಿಂಹವೊಂ। ದಿರುವೆ ಕಚ್ಚಿತುಕಂಡೆ
ಮರವೆಕೊಂಬೊಡೆದು ಧರೆಬೆಂದು । ಕೈಲಾಸ
ವುರಿವುದಕಂಡೆ ಸರ್ವಜ್ಞ ॥ ೧೪ ॥
ಸೀಗೆಬಾಗೆಯನಾರು । ಕಾಗಿವೋರೆಯುಗಡ್ಡೆ
ಸಾಗರದಸತ್ತುವೊಡಗೂಡೆ । ಹೇಮತಾ
ನಾಗಲೇಅಕ್ಕು ಸರ್ವಜ್ಞ ॥ ೧೫ ॥
ಹೆಂಣುಬಿಟ್ಟವದೈವ । ಹೊನ್ನುಬಿಟ್ಟವದೈವ
ಮಂಣುಬಿಟ್ಟವನೆದೈವ । ಲೋಕಕ್ಕೆ ಮು
ಕ್ಕಣ್ಣನೆದೈವ ಸರ್ವಜ್ಞ ॥ ೧೬ ॥
ಓದಿದವೋದೆಲ್ಲ । ಮೇದಕಬ್ಬಿನಸಿಪ್ಪೆ
ವೋಧಿನಬಡಲು ತಿಳಿಯಲ್ಕೆ । ಸಿಪ್ಪೆಕ
ಬ್ಬಾದಂತೆ ತಾನೆ ಸರ್ವಜ್ಞ ॥ ೧೭ ॥



# ಲಘು ಟಿಪ್ಪಣಿ.

---

1. ೧ ಸೂಡು—ಮುಡಿ ೩ ಮುಂ, ದೇವಋಷಿಯಾಗಿ, ೯ ಬಿಂದು+ಇಟ್ಟು=ಬಿಂದಿಟ್ಟು ೨೦ ಹರುವಾಗಿಹೋಯ್ತು—ಸುಲಭವಾಗಿ ತಿಳಿಯಿತು ೨೪ ಅಂಬರಕೆ—ಆಕಾಶಕ್ಕೆ, ೨೮ ಪಂಚಪಾಶ—ಪಂಚಭೂತಗಳು.

2. ೪ ಸುರಭಿ—ಕಾಮಧೇನುವು ಆವು—ಹಸು. ಪರುಸ—ಸ್ಪರ್ಶವೇಧಿಯೆಂಬ (ಲೋಹವನ್ನು ಚಿನ್ನಮಾಡುವ) ಕಲ್ಲು. ೮ ಐಮೊಗ—ಪಂಚಮುಖಗಳು ೯ ದರುಶನಗಳು ಆರು—ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸೆ, ಉತ್ತರಮೀಮಾಂಸೆ ಇವು. ಪುರುಷರು ಮೂವರು ತ್ರಿಮೂರ್ತಿಗಳು ೧೦. ಒಮ್ಮಾರು—ಒಂದುಮಾರು. ೧೭. ಬೆಳಲಹಣ್ಣು—ಬೇಲದಹಣ್ಣು ೩೦. ರಾಜಾನ್ನ—ರಾಜವೆಂಬಬತ್ತ. ೩೮. ಹಯನು—ಕರೆಯುವ ಹಸುವು. ೪೦. ತತ್ವಮಸಿ—ತತ್, ತ್ವಂ, ಅಸಿಎಂಬವೇದಾಂತವಾಕ್ಯಗಳು. ೪೪. ಕರತಳಾಮಲಕ—ಅಂಗೈಯಲ್ಲಿಹಿಡಿದ ನೆಲ್ಲಿಯಕಾಯಿ. ೪೬. ಹೊಲಬು (ಮುಕ್ತಿಯ) ಮಾರ್ಗ.

3. ೭ ಹುಟ್ಟಿಪನಶಿರ—ಬ್ರಹ್ಮನತಲೆ ೮. ಪೊಡಮಡುತ—ನಮಸ್ಕರಿಸುತ್ತ. ೧೧. ಕುಂಜರವು—ಆನೆಯು ೧೬. ಹತ್ತುಜನನ—ದಶಾವತಾರಗಳು. ೨೩. ಆರಕ್ಕರ—ಷಡಕ್ಷರಗಳು(ಓಂನಮಶ್ಶಿವಾಯ). ೨೪ ಕನಿದಂ—ಕೋಪಿಸಿದವನು ೨೫. ಬಲ್ಲಿದ—ಘನವಾದ. ೩೦. ಕಾಯುವೆಂಬ ಕಮಲವೇ ಸಂಜ್ಞೆ. ಕಾಯು (?)

4. ೧. ನಿಟ್ಟಿಪ್ಪನು—ನೋಡುವವನು. ೧೧. ಕೊಟ್ಟಿಗೆ+ಉರಿಪಂತೆ. ೧೪. ಜಾಳು—ಒಣಮಾತುಗಳು ೧೫. ಬತ್ತೀಸ—ಮೂವತ್ತೆರಡು. ೨೪ ಬಣಗುಗಳ—ಮೂಢರನ್ನು.

5. ೩ ಕಾತಂತೆ—ಕಾಯಿಗಳುಬಿಟ್ಟಹಾಗೆ. ೭ ವರ್ಮ—ಕವಚವು (ಮರ್ಮ?) ೮. ಅರೆನೂರನು—ಅಯ್ವತ್ತನ್ನು. ೧೧. ಬೇಹಾರ—ವ್ಯಾಪಾರ. ೧೨. ಕಾಯಿಕ—ಶರೀರದ ಸಂಬಂಧವಾದ ೧೬. ನವನಾಳ—ಕಿವಿಮುಂತಾದ ನವರಂಧ್ರಗಳು. ೧೭ ಹರದೆಯರು—ಸ್ತ್ರೀಯರು. ಕರಣಗಳ—ಇಂದ್ರಿಯಗಳನ್ನು.

6. ೧ ಆರರಅಟ್ಟುಳಿ—ಕಾಮಕ್ರೋಧಾದಿ ಅರಿಷಡ್ವರ್ಗದ ಉಪದ್ರವ. ಮೂರುಕಂಟಕ—ತಾಪತ್ರಯಗಳು. ೪. ಅಣವಾದಿಯೊಳು—ಅಣವಮುಂತಾದ ಮೂರುಮಲಗಳಲ್ಲಿ. ಕೇಣವಿಡದೆ—ಕ್ರೋಧವಿಲ್ಲದೆ. ೬. ಮಲಯಜ—ಶ್ರೀಗಂಧದಮರ. ೧೧. ತಾಕು—ತಡೆ ೧೨. ಅರುಹು—ಜ್ಞಾನ ೧೪. ಅಯ್ವರ ಅಟ್ಟುಳಿ—ಪಂಚೇಂದ್ರಿಯಗಳ ಕಾಟ.

7. ಪಂಚಮಹಾಪಾತಕ--ಬ್ರಹ್ಮಹತ್ಯಾದಿ ಮಹಾಪಾಪಗಳು. ೧೩. ಕಳಹೋ
ಗಿ—ಕದಿಯಲಿಕ್ಕೆಹೋಗಿ. ೧೬. ಮಿಥ್ಯ—ಸುಳ್ಳು. ೨೧. ಮುಕುರ—ಕನ್ನಡಿ.
ಊಣೆಯು—ಕೊರತೆ. ೩೭. ಬಿತ್ತು—ಬೀಜ. ೩೮. ನಿರಾಕಾರ—ಆಕಾರವಿಲ್ಲದ
ವನು. ೪೨. ಹಂಚು—ಮಡಕೆ ೪೫. ಹೇವ—ಅಸಹ್ಯ. ೫೪. ಅನ್ನೆಯ—ಅನ್ಯಾ
ಯ. ೫೬ ಕೇಳುವೆ—ಗಾನ. ೬೭ ಕೀಳಿಲಿ ಕೆಳಭಾಗದಲ್ಲಿ. ೭೩. ನಿರ್ವ್ಯಾಜ—
ನೆವವಿಲ್ಲದೆ. ೭೬. ಹಣ್ಣದಿಹುದು—ಮಾಡದೇಇರುವುದು. ೭೯. ಅಯ್ವರನು—
ಪಂಚೇಂದ್ರಿಯಗಳನ್ನು. ೮೪ ಕಪ್ಪರ—ಭಿಕ್ಷಾಪಾತ್ರೆ. ೮೬. ಮಿಸುನಿ—ಚಿನ್ನ.
೯೫. ಆತುಮನ—ಪರಮಾತ್ಮನ.

8. ೨. ಮಳ್ಳಿಡಿದು—ಮರುಳುಹಿಡಿದು. ೧೫. ಗಜ—ಆನೆ. ೧೮. ದಿಂಡೆ
ಯು—ದುಷ್ಟನು. ೨೭. ತುರುಕರು—ಹಸುವು ಮತ್ತು ಕರುವು. ೨೮. ಇಕ್ಕಿ+ಅಡ
ಕಲಿತ—ದಾನಮಾಡಿ ಅದನ್ನು ಹೇಳಿಕೊಂಡವನು. ೩೧. ಧಾತು+ಒಂದು

9. ೧. ಯೋಗವಟ್ಟಿಗೆ—ಯೋಗದಂಡ. ೨. ದೂಸಿಯ—ರಂಧ್ರಬಿದ್ದ.
೬. ಹರಿಪಹಕ್ಕಿಯ—ಸ್ವೇಚ್ಛೆಯಿಂದ ಓಡುವ ಇಂದ್ರಿಯಗಳನ್ನು ನೊರೆವಾಲ—
ಆತ್ಮಧ್ಯಾನವೆಂಬ ಹಾಲನ್ನು. ೭. (ತಾ)ಹೃದಯವೆಂಬ ಕಮಲಮಧ್ಯದಲ್ಲಿರುವ
ಪರಮಾತ್ಮನಲ್ಲಿ ಮನಸ್ಸನ್ನು ನಿಲ್ಲಿಸುವವನೇಯೋಗಿಯು. ೮. ಮೂರೂರು—ಇಂ
ಡಾಪಿಂಗಳಾ ಸುಷುಮ್ನೆಗಳೆಂಬ ಮೂರು. ನಾಡಿಗಳು ಬಟ್ಟೆಗಳು ನಾಲ್ಕು-ಕಣ್ಣು
ರಂಧ್ರಗಳೆರಡು, ಮೂಗಿನರಂಧ್ರಗಳೆರಡು. ೯. ಕಾಳಿಂಗೆ—ಕಪ್ಪಿಗೆ. ೧೧.
ಒಂದು ಕಂಬದೊಳು—ಮನಸ್ಸಿನಲ್ಲಿ, ಐದು ಗಂಧ ಹಂಸನ—ಪಂಚೇಂದ್ರಿಯ
ಗಳನ್ನು. ೧೬. ಹಮ್ಮು—ಅಹಂಕಾರ. ೧೮. ಕುಂಡಲಿ—ಮನಸ್ಸೆಂಬಸರ್ಪ.
೨೨. ಒಂದರಾಮೊದಲೊಳಗೆ—ಪ್ರಕೃತಿಪ್ರಾರಂಭದಲ್ಲಿ ೨೬. ಇಪ್ಪತ್ತೈದನೆಯ ತತ್ವ
ಆತ್ಮನು. ೩೪. ಕಾದಾತ—ಜಯಿಸಿದನು (ರಕ್ಷಿಸಿದನು) ೩೬. ನೂರು—ಶತ
ವರ್ಷಗಳು, ೩೮. ಒಪ್ಪು+ಅರಸಿ—ಯೋಗ್ಯವಾದುದನ್ನು ಹುಡುಕಿ. ೪೨. ಭವ
ಮಾಲೆ—ಜನ್ಮಗಳಸಾಲು, ೪೪. ಶ್ವಪಚ—ನಾಯನ್ನು ಬೇಯಿಸುವವನು (ಚಂ
ಡಾಲನು) ೫೧. ನಲ್ಲೆಯರು—ಸ್ತ್ರೀಯರು

10. ೧. ನನ್ನಿ—ಸತ್ಯವಾಕ್ಯ ೧೩ ಅಂದಳ—ಪಾಲಕಿ ಸತ್ತಿಗೆ—ಛತ್ರಿ
ಬಿದರದವ—ಭಯವಿಲ್ಲದವನು(?) ೪೮ ಇಟ್ಟು—ಅನ್ನವಿಟ್ಟು. ೫೪. ಬೈತು—ಬಚ್ಚಿಟ್ಟು
೫೫ ಮರ್ತ್ಯ—ಭೂಲೋಕ. ೫೬ ಅಟ್ಟು—ಅಡಿಗೆಮಾಡಿ. ೬೩. ಹಣ್ಣಿಸಿ—ಉಂಟು
ಮಾಡಿ ಹರದೆಯರು—ಸ್ತ್ರೀಯರು. ೬೬. ಕಪ್ಪರ—ಚಿಪು (ಭಿಕ್ಷಾಪಾತ್ರೆ).

11. ೬ ಬಿನ್ನಣ—ಚಾತುರ್ಯವಾಕ್ಯ (ವಿಜ್ಞಾನಂ) ೧೧. ಹಾವಸೆ—ಪಾಚಿ.
೨೦. ಬೈತ್ರ—ದೋಣಿ (ಹಡಗು) ೨೧. ಇಚ್ಚಕ+ಬೇಳುವೆಮಾತು ೨೪ ರೂಢಿ

ಪತಿ—ದೊರೆ. ೨೬ ಸಿದಿಗೆ—ಸತ್ತಿಗೆ (ಛತ್ರಿ) ೨೯. ಬೆಸಲಾದ—ಗರ್ಭವಾದ. ೩೩ ಸುರಗಿ—ಚಿಕ್ಕಕತ್ತಿ, ೩೫. ಖಂಡೆಯ—ಕತ್ತಿ. ೩೯ ನುಲಿಬೆಂದಹೊರಸು—ನುಲಿತಪ್ಪಿ ಬಿಚ್ಚಿಹೋದಹಗ್ಗ ೪೦ ತೇಜಿ—ಕುದುರೆ, ಹೊಟ್ಟೆಗೆಯುರು—ಗೌಡಿಯರು. ೪೭. ತಲ್ಲಣನು—ಭಯಂಕರನು. ೪೯. ಹೊರಸು ಜೋಳಿಗೆ—ಹಗ್ಗದ ಜೋಳಿಗೆ (ಚೀಲ) ೫೩. ಹಮ್ಮು—ಗರ್ವ.

13. ಉರ—ಎದೆ ೫. ಹರದ—ವ್ಯಾಪಾರಿ ೬. ಅಳೆ—ಮಜ್ಜಿಗೆ ೧೦ ಶುನಿ—ಹೆಣ್ಣುನಾಯಿ. ೧೯. ಹೊಳಹು—ಕಾಂತಿ. ೨೦ ಇಪ್ಪುರಿ—ಎರಡುಹುರಿ

14. ೭ ನೆಗಳು—ಮೊಸಳೆ. ಹುಡಿ—ನೆಲದಮಣ್ಣು. ೧೧. ಜೊನ್ನ—ಬೆಳದಿಂಗಳು. ೧೨. ಮಿಂಡಿ—ಪ್ರಾಯದಹೆಣ್ಣು. ಬೈತ್ರ—ದೋಣಿ. ಕೊಂಡೆಯನು—ಚಾಡಿಗಾರನು.

15. ೧. ಹಸ್ತಿ—ಆನೆ. ಕಸ್ತಿ—ಸಾಮರ್ಥ್ಯ. ೩. ವ್ಯಾಧನು—ಬೇಡನು ಪ್ರತಿರೂಹು—ಪ್ರತಿಯಾದರೂಪ ೬. ಶ್ವಾನ—ನಾಯಿ.

16. ೮. ಓತು—ಪ್ರೀತಿಯಿಂದ. ಚಿಪ್ಪಿಲಿ—ಚಿಪ್ಪಿನಲ್ಲಿ. ೨೯. ಹಣ್ಣಾವು—ನಡೆಯುವುವು.

17. ೨. ಕಚ್ಚುಟ—ದಟ್ಟಿ.

18. ೪. ಹೆರೆ—ಪೊರೆ. ೧೩. ಕಿಸುಕೂಳು—ಕೆಂಬಣ್ಣದ ಅನ್ನ.

19. ೧. ದೊಗ್ಗಮಜ್ಜಿಗೆ—ನೀರುಮಜ್ಜಿಗೆ ಕಿಸುವಾಯಿ—ಕೆಂಪುಬಾಯಿ. ೪. ತೊಗೆ—ತೊಪ್ಪೆ. ಹವಣ—ಪ್ರಮಾಣವನ್ನು. ೬. ಮಣಕೆಮ್ಮೆ—ಎಮ್ಮೆಯ ಕಡಸು.

20. ೬. ಅಳೆ—ಮಜ್ಜಿಗೆ. ೧೨. ಉದ್ದರಿ—ಸಾಲ. ೧೮ ಸವಾಲಕ್ಷ—ಒಂದೂ ಕಾಲು ಲಕ್ಷ. ೨೨. ತ್ರಿಣಯನ—ಈಶ್ವರನು. ೨೭. ಶಶಕ—ಮೊಲ ೨೯. ಶುಲ್ಬ—ಲಾಮಂಚದತೊಗಟೆ.

21. ೧. ರಂಧ್ರ. ೯. ಗತಿ. ೪. ಆದಿತ್ಯ. ೧೨. ಇವುಮೂರುಕೂಡಿ ಅರ್ಧಮಾಡಿ ಅದಕ್ಕೆ ಆತಿಥಿಯ ಸಂಖ್ಯೆ ಕೂಡಿಸಿದರೆ ಅಷ್ಟನೆಯ ನಕ್ಷತ್ರವು ೨. ಚೈತ್ರಾದಿ ಕಳೆದಮಾಸವನ್ನು ನಾಲ್ಕರಿಂದ ಗುಣಿಸಿ, ಅಂದಿನತಿಥಿ ಸೇರಿಸಿದರೆ ಅಷ್ಟನೆಯ ಕರಣವು ೩. ಕಳೆದಮಾಸ ಸಂಖ್ಯೆಯನ್ನು ೨. ರಿಂದಗುಣಿಸಿ, ಅಂದಿನತಿಥಿ ಕೂಡಿಸಿದರೆ ನಕ್ಷತ್ರವು ಬರುವುದು. ೭. ಮಾಸದಸಂಖ್ಯೆಯನ್ನು ೪. ರಿಂದ ಗುಣಿಸಿ ಆ ದಿನದತಿಥಿಯನ್ನು ಸೇರಿಸಿದರೆ ಯೋಗವು ಬರುವುದು ೧೦. ಮಾರ್ತಾಂಡ—ಸೂರ್ಯನು. ಪರಿವೇಷ—ಗುಡಿಕಟ್ಟುವುದು. ೧೩. ಅಳಿ—ತುಂಬಿ (ಕಪ್ಪು) ೨೨. ಸೀನುವವನು ಬಲಗಡೆ ಇದ್ದರೆ ಶುಭವು. ೨೪ ಕುರಿ—ಮೇಷ

